RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಅಕ್ಟೋಬರ್ ೩, ೨೦೧೩ (ಆಶ್ವಯುಜ ೧೧, ಶಕ ವರ್ಷ ೧೯೩೫)<br>Bangalore, Thursday, October 3, 2013 (Aashwayuja 11, Shaka Varsha 1935) | ಸಂಚಿಕೆ ೪೦<br>Issue 40 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2013–14ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ 25 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/01/2013–14 ಡಿಆರ್‌ಡಿಎ (ಎಸ್‌ಎಲ್ ನಂ. 10) ದಿನಾಂಕ: 29–06–2013

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2013–14ನೇ ಸಾಲಿಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ, ರಾಜ್ಯದ 25 ಜಿಲ್ಲಾ ಪಂಚಾಯತಿಗಳಿಗೆ [ಚಿಕ್ಕಮಗಳೂರು, ಚಿಕ್ಕಬಳ್ಳಾಪುರ, ದಾವಣಗೆರೆ, ಕೊಪ್ಪಳ ಮತ್ತು ಯಾದಗಿರಿ 5 ಜಿಲ್ಲೆಗಳನ್ನು ಹೊರತುಪಡಿಸಿ] ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ (1)ರ ಪತ್ರದಲ್ಲಿ ಒಂದನೇ ಕಂತಿನ ಅನುದಾನ **₹ 432.97 ಲಕ್ಷ (ರೂ. ನಾಲ್ಕು ಕೋಟಿ ಮೂವತ್ತೆರಡು ಲಕ್ಷದ ತೊಂಬತ್ತೇಳು ಸಾವಿರ ಮಾತ್ರ)** ಬಿಡುಗಡೆ ಮಾಡಿದೆ. ಅದರಂತೆ, ಅನುಬಂಧದಲ್ಲಿ ತೋರಿಸಿರುವ 25 ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ **₹ 144.40 ಲಕ್ಷ (ರೂ. ಒಂದು ಕೋಟಿ ನಲವತ್ತನಾಲ್ಕು ಲಕ್ಷದ ನಲವತ್ತು ಸಾವಿರ ಮಾತ್ರ)** ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 26 ಎಸ್‌ಜಿವೈ (ಡಿಆರ್‌ಡಿಎ) 2013, ಬೆಂಗಳೂರು, ದಿನಾಂಕ: 29ನೇ ಜುಲೈ, 2013**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2013–14ನೇ ಸಾಲಿಗೆ ಒಂದನೇ ಕಂತಿನ ಅನುದಾನವಾಗಿ ಅನುಬಂಧದಲ್ಲಿ ತೋರಿಸಿರುವ 25 ಜಿಲ್ಲಾ ಪಂಚಯತಿಗಳಿಗೆ ಒಟ್ಟು ₹ 144.40 ಲಕ್ಷ (ರೂ. ಒಂದು ಕೋಟಿ ನಲವತ್ತನಾಲ್ಕು ಲಕ್ಷದ ನಲವತ್ತು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :** ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6– ಜಿಲ್ಲಾ ಪಂಚಾಯತ್–06 ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2013–14 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2525–00–101–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2)

ದಿನಾಂಕ 26–04–2007ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆಆಇ 172 ವೆಚ್ಚ–6/2011, ದಿನಾಂಕ: 30–03–2011ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ : ಗ್ರಾಅಪ 321 ಪಿಬಿಎಸ್ 2013, ದಿನಾಂಕ: 26–07–2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಹೇಮಲತ,**
ನಿರ್ದೇಶಕರು (ಸ್ವಉಕಾ)
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 26 ಎಸ್‌ಜಿವೈ (ಡಿಆರ್‌ಡಿಎ) 2013, ಬೆಂಗಳೂರು, ದಿನಾಂಕ: 29–07–2013ಕ್ಕೆ ಅನುಬಂಧ**

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2012–13ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಬಾಗಲಕೋಟೆ | 461 | 2900ZZ0001 | 19,13,000 | 6,38,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 15,44.000 | 5,15,000 |
| 3 | ಬೆಂಗಳೂರು ನಗರ | 401 | 0100ZZ8001 | 15,44,000 | 5,15,000 |
| 4 | ಬೆಳಗಾಂ | 413 | 2200ZZ0002 | 19,13,000 | 6,38,000 |
| 5 | ಬಳ್ಳಾರಿ | 418 | 3400ZZ0001 | 19,13,000 | 6,38,000 |
| 6 | ಬೀದರ್ | 419 | 3800ZZ5701 | 15,44,000 | 5,15,000 |
| 7 | ಬಿಜಾಪುರ | 414 | 2800ZZ9152 | 15,44,000 | 5,15,000 |
| 8 | ಚಾಮರಾಜನಗರ | 456 | 1000ZZ0001 | 15,44,000 | 5,15,000 |
| 9 | ಚಿತ್ರದುರ್ಗ | 403 | 1600ZZ0001 | 19,13,000 | 6,38,000 |
| 10 | ದಕ್ಷಿಣ ಕನ್ನಡ | 409 | 1900ZZ0047 | 15,44,000 | 5,15,000 |
| 11 | ಧಾರವಾಡ | 415 | 2500ZZ8798 | 15,44,000 | 5,15,000 |

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2012–13ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|
| 12 | ಗದಗ್ | 462 | 2600ZZ00001 | 15,44,000 | 5,15,000 |
| 13 | ಗುಲ್ಬರ್ಗಾ | 417 | 3200ZZ0003 | 19,13,000 | 6,38,000 |
| 14 | ಹಾಸನ | 410 | 1300ZZ0003 | 19,13,000 | 6,38,000 |
| 15 | ಹಾವೇರಿ | 463 | 2700ZZ0001 | 19,13,000 | 6,38,000 |
| 16 | ಕೊಡಗು | 411 | 12000ZZ0001 | 15,44,.000 | 5,15,000 |
| 17 | ಕೋಲಾರ | 404 | 0700ZZ8002 | 15,44,000 | 5,15,000 |
| 18 | ಮಂಡ್ಯ | 412 | 1100ZZ0001 | 19,13,000 | 6,38,000 |
| 19 | ಮೈಸೂರು | 407 | 0900ZZ0001 | 19,13,000 | 6,38,000 |
| 20 | ರಾಯಚೂರು | 420 | 3600ZZ0001 | 15,44,000 | 5,15,000 |
| 21 | ರಾಮನಗರ | 452 | 0400ZZ0001 | 15,44,000 | 5,15,000 |
| 22 | ಶಿವಮೊಗ್ಗ | 405 | 1400ZZ0002 | 19,13,000 | 6,38,000 |
| 23 | ತುಮಕೂರು | 406 | 0800ZZ0001 | 19,13,000 | 6,38,000 |
| 24 | ಉಡುಪಿ | 457 | 2000ZZ0001 | 15,44,000 | 5,15,000 |
| 25 | ಉತ್ತರ ಕನ್ನಡ | 416 | 3000ZZ0080 | 21,82,000 | 7,27,000 |
| | | | **ಒಟ್ಟು** | **4,32,97,000** | **1,44,40,000** |

**ಪಿ. ಹೇಮಲತ,**
ನಿರ್ದೇಶಕರು (ಸ್ವಉಕಾ)
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**PR 804**
**SC 10**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅಕ್ಕಿಯನ್ನು ಎಕನಾಮಿಕ್ ದರದಲ್ಲಿ ಖರೀದಿಸಿ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಣಾ ಮಾಡುವ ದರಪಟ್ಟಿಯ ಮಂಜೂರಾತಿ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ದಿನಾಂಕ: 15–06–2013
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: Karnataka/BP. III (Pt), ದಿನಾಂಕ: 05–07–2013
3. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/ECO.Cost rice/2013-14, ದಿನಾಂಕ: 10–07–2013

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ದಿನಾಂಕ: 15–06–2013ರ ಆದೇಶದಲ್ಲಿ ಪ್ರತಿ ಬಿಪಿಎಲ್ ಪಡಿತರ ಚೀಟಿದಾರರ ಕುಟುಂಬಕ್ಕೆ ಕುಟುಂಬದ ಸದಸ್ಯರ ಸಂಖ್ಯೆಯನ್ನು ಆಧರಿಸಿ, ಪ್ರತಿ ಒಂದು ಸದಸ್ಯ ಕುಟುಂಬಕ್ಕೆ 10 ಕಿಲೋ ಅಕ್ಕಿ ಎರಡು ಕುಟುಂಬ ಸದಸ್ಯ ಕುಟುಂಬಕ್ಕೆ 20 ಕಿಲೋ ಮತ್ತು ಮೂರು ಹಾಗೂ ಅದಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬಕ್ಕೆ ಗರಿಷ್ಠ 30 ಕಿಲೋ ಅಕ್ಕಿಯನ್ನು ಪ್ರತಿ ಕಿಲೋ ಅಕ್ಕಿಗೆ ರೂ. 1.00ರ ದರದಲ್ಲಿ ಜುಲೈ 2013ರ ಮಾಹೆಯಿಂದ

ನೀಡಲು ಆದೇಶ ಹೊರಡಿಸಲಾಗಿದೆ. ಸದರಿ ಆದೇಶದನ್ವಯ ಬಿಪಿಎಲ್ ಪಡಿತರ ಚೀಟಿದಾರರರಿಗೆ ಅಕ್ಕಿಯನ್ನು ವಿತರಿಸಲು ಕೊರತೆ ಉಂಟಾದ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ಕೋರಿಕೆಯಂತೆ ಮೇಲೆ ಓದಲಾದ (2)ರ ಕೇಂದ್ರ ಸರ್ಕಾರದ ಪತ್ರದಲ್ಲಿ ಎಕನಾಮಿಕ್ ದರದಲ್ಲಿ ರಾಜ್ಯಕ್ಕೆ ಜುಲೈ, 2013 ಮಾಹೆಗೆ ಮಾತ್ರ ಅನ್ವಯವಾಗುವಂತೆ, 20,000 ಮೆ.ಟನ್ ಅಕ್ಕಿಯನ್ನು ಸಾಮಾನ್ಯ ಅಕ್ಕಿಗೆ ರೂ. 26,900 ದರ ಮತ್ತು ಗ್ರೇಡ್–ಎ ಅಕ್ಕಿಗೆ ರೂ. 27,511 ದರದಲ್ಲಿ ನಿಗಧಿಪಡಿಸಿ ಹಂಚಿಕೆ ಮಾಡಿರುತ್ತದೆ. ಮೇಲೆ ಓದಲಾದ (3)ರ ಆಯುಕ್ತರ ಪತ್ರದಲ್ಲಿ ಎಕಾನಾಮಿಕ್ ದರದಲ್ಲಿ ಖರೀದಿಸುವ ಅಕ್ಕಿಗೆ ದರಪಟ್ಟಿಯನ್ನು ಅನುಮೋದಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ವಯ, ಅಕ್ಕಿಯನ್ನು ಎಕಾನಾಮಿಕ್ ದರದ ಖರೀದಿಯ ಆಧಾರದ ಮೇಲೆ ಸರ್ಕಾರವು ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸುವ ಅಕ್ಕಿಯ ದರವನ್ನು ನಿಗಧಿಪಡಿಸಬೇಕಾಗಿರುತ್ತದೆ. ಅದರಂತೆ, ಈ ಕೆಳಕಂಡಂತೆ ಆದೇಶ :–

**ಸರ್ಕಾರದ ಆದೇಶ ಸಂಖ್ಯೆ: ಅನಾಸ 43 ಡಿಆರ್‌ಎ 2013, ಬೆಂಗಳೂರು, ದಿನಾಂಕ: 15ನೇ ಜುಲೈ, 2013**

(ಪ್ರತಿ ಕ್ವಿಂಟಾಲ್‌ಗೆ)

| ಕ್ರಮ ಸಂಖ್ಯೆ | ವಿವರ | ಅಕ್ಕಿ ಸಾಮಾನ್ಯ | ಅಕ್ಕಿ ಗ್ರೇಡ್–ಎ |
|---|---|---|---|
| 1 | ಕೇಂದ್ರ ವಿತರಣಾ ದರ | 2696 | 2751 |
| 2 | ರಾಜ್ಯ ಸರ್ಕಾರದ ಸಹಾಯಧನ | 2647 | 2702 |
| 3 | ಸಗಟು ಲಾಭಾಂಶ | 20 | 20 |
| 4 | ಸಗಟು ವಿತರಣಾ ದರ | 69 | 69 |
| 5 | ಚಿಲ್ಲರೆ ಲಾಭಾಂಶ | 31 | 31 |
| 6 | ಚಿಲ್ಲರೆ ವಿತರಣಾ ದರ | 100 | 100 |
| 7 | ಚಿಲ್ಲರೆ ವಿತರಣಾ ದರ (ಪ್ರತಿ ಕೆ.ಜಿ.ಗೆ) | 1.00 | 1.00 |

ಇದಕ್ಕೆ ತಗಲುವ ಹೆಚ್ಚುವರಿ ಸಹಾಯಧನ ಮೊತ್ತವನ್ನು ಲೆಕ್ಕ ಶೀರ್ಷಿಕೆ 2408–01–102–0–01–106ರಲ್ಲಿ ಪಾವತಿಸಲು ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

PR 809
SC 200

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ : ಕಂಇ 68 ಎಲ್‌ಜಿಸಿ 2011, ಬೆಂಗಳೂರು, ದಿನಾಂಕ : 12–07–2013**

ಸರ್ಕಾರದ ಆದೇಶ ಸಂಖ್ಯೆ : ಕಂಇ 68 ಎಲ್‌ಜಿಸಿ 2011 ದಿನಾಂಕ : 26/05/2012ರಲ್ಲಿ ಮೆ॥ ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್, ಬೆಂಗಳೂರು, ಇವರಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ 115–08 ಎಕರೆ ಜಮೀನನ್ನು ಮಂಜೂರು ಮಾಡಿ ಆದೇಶ ಹೊರಡಿಸಿದ್ದು, ಇದರಲ್ಲಿ ಕಂಭತ್ರಹಳ್ಳಿ ಗ್ರಾಮದ ಸರ್ವೆ ನಂ. 1ರಲ್ಲಿ 17–34 ಎಕರೆ, ಅಡವಿಹಳ್ಳಿ ಗ್ರಾಮದ ಸರ್ವೆ ನಂ. 379/ಎಪಿ3ರಲ್ಲಿ 19–70 ಎಕರೆ ಹಾಗೂ ಸರ್ವೆ ನಂ. 492/ಬಿಪಿ1ರಲ್ಲಿ 78–04 ಎಕರೆ ಜಮೀನು ಸೇರಿ ಒಟ್ಟು 115–08 ಎಕರೆ ಜಮೀನು ಯಥಾಸ್ಥಿತಿಯಲ್ಲಿರುತ್ತದೆ. **ಹರಪನಹಳ್ಳಿ ಗ್ರಾಮದ ಸರ್ವೆ ನಂ. 492/ಎಪಿ1 ಅನ್ನು ಕೈಬಿಟ್ಟು, 492/ಬಿಪಿ1ರಲ್ಲಿಯೇ 78–04 ಎಕರೆ ಜಮೀನು ಎಂದು ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–3)

PR 842
SC 25

## ಕಂದಾಯ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ : ಕಂಇ 176 ಆರ್‌ಇಹೆಚ್ 2012, ಬೆಂಗಳೂರು, ದಿನಾಂಕ : 17–08–2013**

ಚಿಕ್ಕಮಗಳೂರು ಜಿಲ್ಲೆಯ ಭದ್ರಾ ವನ್ಯ ಜೀವಿ ಅಭಯಾರಣ್ಯ ಯೋಜನೆಯ ಅನುಷ್ಠಾನದಲ್ಲಿ ನಿರ್ವಸಿತರಾಗುವ ಜನರಿಗೆ ಪುನರ್ವಸತಿ ಕಲ್ಪಿಸಲು ಜಿಲ್ಲಾಮಟ್ಟದ ಅಧಿಕಾರಿಗಳ ಅನುಷ್ಠಾನ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ : ಕಂಇ 247 ಆರ್‌ಇಹೆಚ್ 2000 ದಿನಾಂಕ : 10–05–2001 ರಲ್ಲಿ ರಚಿಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿನ ಕ್ರಮ ಸಂಖ್ಯೆ : 14 ರಲ್ಲಿನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾ ವನ್ಯ ಜೀವಿ ವಿಭಾಗ ಚಿಕ್ಕಮಗಳೂರು

ಇವರು ಅನುಷ್ಠಾನ ಸಮಿತಿಯ ಸದಸ್ಯ ಕಾರ್ಯದರ್ಶಿಯವರಾಗಿದ್ದು, ಈಗ ಸದರಿ ಹುದ್ದೆಯನ್ನು ಅರಣ್ಯ ಸಂರಕ್ಷಣಾಧಿಕಾರಿ ಮತ್ತು ನಿರ್ದೇಶಕರು ಭದ್ರಾ ಹುಲಿ ಸಂರಕ್ಷಿತ ಚಿಕ್ಕಮಗಳೂರು ಎಂಬ ಹೊಸ ಎಕ್ಸ್‌ಕೇಡರ್ಸ್ ಹುದ್ದೆಯನ್ನಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 09 ಎಸ್‌ಎಫ್‌ಪಿ 2012 ದಿನಾಂಕ : 30–04–2012 ರಲ್ಲಿ ಉನ್ನತೀಕರಿಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ : ಕಂಇ 247 ಆರ್‌ಇಹೆಚ್ 2000 ದಿನಾಂಕ : 10–05–2001ರ ಕ್ರಮ ಸಂಖ್ಯೆ : 14 ರಲ್ಲಿನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾ ವನ್ಯ ಜೀವಿ ವಿಭಾಗ ಚಿಕ್ಕಮಗಳೂರು ಹುದ್ದೆಯನ್ನು "ಅರಣ್ಯ ಸಂರಕ್ಷಣಾಧಿಕಾರಿ ಮತ್ತು ನಿರ್ದೇಶಕರು ಭದ್ರಾ ಹುಲಿ ಸಂರಕ್ಷಿತ ಚಿಕ್ಕಮಗಳೂರು" ಎಂದು ಮಾರ್ಪಡಿಸಿ ಆದೇಶಿಸಿದೆ. ಸದರಿ ಆದೇಶದಲ್ಲಿ ಮತ್ತಿತರೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಲಲಿತಾ ಹೆಚ್. ಹಂದಿಗೋಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**PR 844**
**SC 200**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ಕಂಇ 49 ಆರ್‌ಇಹೆಚ್ 2012, ಬೆಂಗಳೂರು, ದಿನಾಂಕ : 24–05–2013

ಬಾಗಲಕೋಟೆ ಜಿಲ್ಲೆಯ, ಹುನಗುಂದ ತಾಲ್ಲೂಕು, ಐಹೊಳೆ ಗ್ರಾಮವು ಐತಿಹಾಸಿಕ ಸ್ಮಾರಕಗಳ ಸುತ್ತಲೂ ಇರುವ ಕಟ್ಟಡಗಳನ್ನು ಸಂಪೂರ್ಣವಾಗಿ ಸ್ಥಳಾಂತರಿಸುವ ಬಗ್ಗೆ ಹೊರಡಿಸಿರುವ ದಿನಾಂಕ : 31–08–2012ರ ಸರ್ಕಾರಿ ಆದೇಶ ಸಂಖ್ಯೆ : ಕಂಇ 49 ಆರ್‌ಇಹೆಚ್ 2012ರಲ್ಲಿ "ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : 530 ವೆಚ್ಚ–7 ದಿನಾಂಕ : 28/30–07–2012ರ ಸಹಮತಿ ಮೇರೆಗೆ" ಹೊರಡಿಸಲಾಗಿದೆ ಎಂದು ನಮೂದಿಸಿರುವುದನ್ನು, "ಕರ್ನಾಟಕ ಸರ್ಕಾರ ವ್ಯವಹಾರ ನಿರ್ವಹಣೆ ನಿಯಮ 17(2) ರನ್ವಯ ಹೊರಡಿಸಲಾಗಿದೆ" ಎಂದು ಓದಿಕೊಳ್ಳತಕ್ಕದ್ದು, ಉಳಿದಂತೆ ಸದರಿ ಆದೇಶದಲ್ಲಿ ಮತ್ತಿತರ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಲಲಿತಾ ಹೆಚ್. ಹಂದಿಗೋಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**PR 845**
**SC 200**

## ಒಳಾಡಳಿತ ಸಚಿವಾಲಯ

**ವಿಷಯ:** ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ಮೂರು ತಿಂಗಳ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಒಇ ಲಾ 112 ಎಲ್‌ಸಿಇ 2012, ದಿನಾಂಕ : 28–12–2012.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 112 ಎಲ್‌ಸಿಇ 2012, ದಿನಾಂಕ : 28–03–2013.
3. ಸರ್ಕಾರದ ಟಿಪ್ಪಣಿ ಸಂಖ್ಯೆ : ಲಾ/5023/ಪ್ರಕಾ/2013, ದಿನಾಂಕ : 04–04–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರಲ್ಲಿನ ಸರ್ಕಾರದ ಆದೇಶದಲ್ಲಿ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ಮೂರು ತಿಂಗಳ ಅವಧಿಗೆ ಮುಂದುವರೆಸುವ ಬಗ್ಗೆ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಿಂದ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3)ರಲ್ಲಿನ ಟಿಪ್ಪಣಿಯಲ್ಲಿ ಸದರಿ ಶೀಘ್ರಗತಿ ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಾಧೀಶರ ಹಾಗೂ ಸಿಬ್ಬಂದಿಗಳೊಂದಿಗೆ ಸೇವೆಯನ್ನು ಮುಂದುವರೆಸಲಾಗಿದೆ. ಆದರಿ ಸದರಿ ಶೀಘ್ರಗತಿ ನ್ಯಾಯಾಲಯಗಳಲ್ಲಿ ಕಾಯಾನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರ ಅವಧಿಯನ್ನೂ ಕೂಡ ಮುಂದುವರೆಸಬೇಕಾಗಿದ್ದು ಈ ಸಂಬಂಧ ಒಳಾಡಳಿತ ಇಲಾಖೆಯು ಆದೇಶವನ್ನು ಹೊರಡಿಸಬೇಕಾಗಿರುತ್ತದೆ ಎಂದು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯವರು ಕೋರಿರುತ್ತಾರೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಅಲ್ಲಿನ ಸಿಬ್ಬಂದಿಗಳೊಂದಿಗೆ ದಿನಾಂಕ : 01–04–2013 ರಿಂದ 30–06–2013 ರವರೆಗೆ ಸೇವೆಯನ್ನು ಮುಂದುವರೆಸಿ ಆದೇಶಿಸಿರುವ ಹಿನ್ನೆಲೆಯಲ್ಲಿ, ಅಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿಶೇಷ ಸರ್ಕಾರಿ ಅಭಿಯೋಜಕರುಗಳ ಸೇವೆಯನ್ನು ದಿನಾಂಕ : 01–04–2013 ರಿಂದ 30–06–2013 ಸೇವೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 245 ಪಿಪಿಇ 2013, ಬೆಂಗಳೂರು, ದಿನಾಂಕ : 13ನೇ ಆಗಸ್ಟ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 01–04–2013 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾದ 54 ಶೀಘ್ರಗತಿ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿಶೇಷ ಸರ್ಕಾರಿ ಅಭಿಯೋಜಕರ ಸೇವಾ ಅವಧಿಯನ್ನು ದಿನಾಂಕ : 01–04–2013 ರಿಂದ 30–06–2013 ರವರೆಗೆ ಮುಂದುವರೆಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ದಿನಾಂಕ : 31–03–2013 ರೊಳಗೆ ಪ್ರಭಾರವನ್ನು ವಹಿಸಿಕೊಟ್ಟಿರುವ ವಿಶೇಷ ಸರ್ಕಾರಿ ಅಭಿಯೋಜಕರುಗಳಿಗೆ ಈ ಆದೇಶವು ಅನ್ವಯಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

**PR 851**

## INFORMATION TECHNOLOGY, BIO-TECHNOLOGY AND SCIENCE AND TECHNOLOGY SECRETARIAT

**SUB :** Constitution of Committee for screening proposals under Karnataka Electronics System Design and Manufacturing (ESDM) Policy-2013.

**READ :** KBITS File No. KBITS/EO(P)/ESDM/2013-14.

**PREAMBLE :**

In Government Order No. ITD 01 PRM 2013, Bangalore dated : 8-3-2013, Government of Karnataka has announced Karnataka ESDM Policy-2013, as recommended by the Karnataka ICT Group 2020, headed by Shri T.V. Mohandas Pai.

Under single file system, in the file read above the MD, KBITS has proposed to constitute a Committee for screening proposals received under the Karnataka ESDM Policy-2013.

The proposal of KBITS has been examined by Government and it has been decided to constitute a Committee. Hence the following order.

**GOVERNMENT ORDER NO. ITD 93 ADM 2013, BANGALORE, DATED : 28-06-2013.**

Government is pleased to constitute a Committee for screening the proposals received under Karnataka ESDM Policy-2013 as below :

| | | | |
|---|---|---|---|
| 1, | Sri B.V. Naidu<br>Co-Chairman, Karnataka ICT Group 2020 | - | Chairman |
| 2. | Sri. Satya Gupta,<br>Member, Karnataka ICT Group 2020 | - | Member |
| 3. | Sri. Sanjay Nayak<br>Member, Karnataka ICT Group 2020 | - | Member |
| 4. | President (or his nominee)<br>Indian Electronic & Semiconductor<br>Association (IESA) | - | Member |
| 5. | Director, IT & BT and<br>MD, KBITS | - | Member Secretary |

The above Committee shall screen/ scrutinize all proposals received under the Karnataka ESDM Policy-2013 and give its specific recommendations to Directorate and KBITS in each case.

By Order and in the name of the Governor of Karnataka,

**M. VASUDEVA MURTHY**
Deputy Secretary to Government,
IT, BT and ST Department.

**P.R. 871**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಮಮಇ 14 ಪಿಹೆಚ್‌ಪಿ 2012, ಬೆಂಗಳೂರು, ದಿನಾಂಕ : 30-07-2013**

ಸರ್ಕಾರಿ ಆದೇಶ ಸಂಖ್ಯೆ : ಮಮಇ 14 ಪಿಹೆಚ್‌ಪಿ 2012, ದಿನಾಂಕ : 15-06-2012ರ ಪುಟ 9 ಹಾಗೂ 10 ರಲ್ಲಿರುವ ಅನುಬಂಧ 2 ರ ತಃಖ್ತೆಯಲ್ಲಿ ಈ ಕೆಳಗಿನ ತಿದ್ದುಪಡಿಗಳೊಂದಿಗೆ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ವಿವರ | ವಿದ್ಯಾರ್ಹತೆ/ಗೌರವಧನ | ಒಟ್ಟು ಮೊತ್ತ |
|---|---|---|---|
| III | ತರಬೇತಿ ವೆಚ್ಚ ಪ್ರತಿ ಅಭ್ಯರ್ಥಿಗೆ ಸರಾಸರಿ 100 ಗಂಟೆಗಳ ತರಬೇತಿ ನೀಡಲು ತಗಲುವ ವೆಚ್ಚ | ಪ್ರತಿ ಗಂಟೆಗೆ ರೂ. 15,000 ದಂತೆ 2000 ಅಭ್ಯರ್ಥಿಗಳಿಗೆ | 30,00,000 |

ಎಂಬುದರ ಬದಲಿಗೆ

| ಕ್ರಮ ಸಂಖ್ಯೆ | ವಿವರ | ವಿದ್ಯಾರ್ಹತೆ/ಗೌರವಧನ | ಒಟ್ಟು ಮೊತ್ತ |
|---|---|---|---|
| III | ತರಬೇತಿ ವೆಚ್ಚ | ಪ್ರತಿ ಗಂಟೆಗೆ ರೂ. 15 ರಂತೆ 100 ಗಂಟೆಗಳಿಗೆ ಪ್ರತಿ ಅಭ್ಯರ್ಥಿಗೆ ರೂ. 15,000 ರಂತೆ 1000 ಅಭ್ಯರ್ಥಿಗಳಿಗೆ | 15,00,000 |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

2) ಪುಟ 9 ರ ತಃಖ್ತೆಯ ಕಲಂ V ರ ನಂತರ ನಮೂದಿಸಿರುವ ಒಟ್ಟು ರೂ. 82,24,000/- ಎಂಬುದರ ಬದಲಿಗೆ ರೂ. 67,24,000 ಎಂದು ಮತ್ತು ಪುಟ 10 ರಲ್ಲಿ ನಮೂದಿಸಿರುವ ಕ್ರಮ ಸಂಖ್ಯೆ 3 ತರಬೇತಿ ವೆಚ್ಚ ರೂ. 30,00,000 ಎಂಬುದರ ಬದಲಾಗಿ ರೂ. 15,00,000 ಎಂದು ಹಾಗೂ ಒಟ್ಟು ಘೋಷ್ವಾರೆಯಲ್ಲಿನ ಕ್ರಮ ಸಂಖ್ಯೆ 1 ರಿಂದ 5 ರವರೆಗೆ ನಮೂದಿಸಿರುವ ರೂ. 82,24,000/- ಗಳ ಬದಲಿಗೆ ರೂ. 67,24,000 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ವಿಕಲಚೇತನರ

ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

**PR. 872**

**SC-100**

## ಸಹಕಾರ ಸಚಿವಾಲಯ

**ವಿಷಯ :** 2013-14ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದ ಮಂಜೂರಾತಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಂಕೆಟಿ-2/07/2013-14, ದಿನಾಂಕ : 11-07-2013 ಹಾಗೂ ದಿನಾಂಕ : 17-08-2013.

**ಪ್ರಸ್ತಾವನೆ :**

2013-14ನೇ ಸಾಲಿಗೆ ಸಹಕಾರ ಇಲಾಖೆಯ ಮುಂದುವರೆದ ಯೋಜನೆಯಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದ ಮಂಜೂರಾತಿಗಾಗಿ ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿದ್ದಾರೆ.

ಸಹಕಾರ ಸಂಘಗಳ ನಿಬಂಧಕರು, ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ ಷೇರು ಬಂಡವಾಳ ರೂಪದಲ್ಲಿ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ** ರೂ. 40.00 ಲಕ್ಷಗಳ ಷೇರು ಬಂಡವಾಳವನ್ನು ಮಂಜೂರು ಮಾಡಲು ಕೋರಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ದಿನಾಂಕ : 11-07-2013ರ ಪತ್ರದಲ್ಲಿ ಸರ್ಕಾರದ ದಿನಾಂಕ: 28-02-2013 ರ ಆದೇಶದ ಷರತ್ತುಗಳಿಗನುಗುಣವಾಗಿ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳನ್ನು** ಆಯ್ಕೆ ಮಾಡಲಾಗಿದ್ದು ಅದರಂತೆ ಈ ಕೆಳಗೆ ನಮೂದಿಸಿರುವ ಸಹಕಾರ ಸಂಘಗಳಿಗೆ ಷೇರು ಬಂಡವಾಳ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ಸಂಘಗಳ ಹೆಸರು | ಷೇರು ಬಂಡವಾಳ (ರೂ. ಲಕ್ಷಗಳಲ್ಲಿ) |
|---|---|---|
| 1. | ಶೃಂಗೇರಿ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ಚಿಕ್ಕಮಗಳೂರು ಜಿಲ್ಲೆ | 10.00 |
| 2. | ಬೀದರ್ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ನಿ., ಬೀದರ್ ಜಿಲ್ಲೆ | 10.00 |
| 3. | ಆಲೂರು ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ನಿ., ಹಾಸನ ಜಿಲ್ಲೆ | 10.00 |
| 4. | ಯಳಂದೂರು ತಾಲ್ಲೂಕು ವ್ಯವಸಾಯ ಸಹಕಾರ ಸಂಘ, ನಿಯಮಿತ ಚಾಮರಾಜನಗರ ಜಿಲ್ಲೆ | 10.00 |
| | **ಒಟ್ಟು** | **40.00** |

ದಿನಾಂಕ : 10–05–2013ರ ಆರ್ಥಿಕ ಇಲಾಖೆ ಆದೇಶದಂತೆ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇ. 25 ರಷ್ಟನ್ನು ಪ್ರತಿ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲು ಅವಕಾಶವಿರುತ್ತದೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 73 ಸಂಮಾಸ 2013, ಬೆಂಗಳೂರು, ದಿನಾಂಕ : 22–08–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ (ಷೇರು ಬಂಡವಾಳ ರೂಪದಲ್ಲಿ) ಯೋಜನೆಯಲ್ಲಿ ಪ್ರಸ್ತಾವದಲ್ಲಿ ನಮೂದಿಸಿರುವ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ** ಮೊದಲನೇ ಕಂತಾಗಿ ತಲಾ ಐದು ಲಕ್ಷ ರೂಪಾಯಿಗಳಂತೆ ಒಟ್ಟು **ಇಪ್ಪತ್ತು ಲಕ್ಷ** ರೂಪಾಯಿಗಳ ಷೇರು ಬಂಡವಾಳವನ್ನು ಸರ್ಕಾರದ ಆದೇಶದ ದಿನಾಂಕ : 28–02–2013ರ ಆದೇಶದ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

ಈ ವೆಚ್ಚವನ್ನು 2013–14ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4425–00–108–0–57 ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ : 10–05–2013 ರನ್ವಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್. ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 873**

**SC 100**

## ಸಹಕಾರ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ : ಸಇ 73 ಸಂಮಾಸ 2013, ಬೆಂಗಳೂರು, ದಿನಾಂಕ : 31–08–2013.**

2013–14ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದ ಮಂಜೂರಾತಿಗಾಗಿ ಹೊರಡಿಸಿರುವ ಸರ್ಕಾರದ ಆದೇಶ

ಸಂಖ್ಯೆ : ಸಇ 73 ಸಂಮಾಸ 2013, ದಿನಾಂಕ : 22–08–2013ರ 2ನೇ ಕಂಡಿಕೆಯಲ್ಲಿ **"ಲೆಕ್ಕ ಶೀರ್ಷಿಕೆ 4425–00–108–0–57ರ"** ಬದಲಾಗಿ **"ಲೆಕ್ಕ ಶೀರ್ಷಿಕೆ 4425–00–108–0–57–100"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್. ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 874**

**SC-100**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಅಬ್ದುಲ್ ರವೂಫ್, ನೋಟರಿ, ಹೊಳೆನರಸೀಪುರ, ಹಾಸನ ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ :**

1. ಶ್ರೀ ಕೆ.ಎಸ್. ಅನಿಲ್, ಗವಿಪುರಂ ಅಂಚೆ, ಬೆಂಗಳೂರು ಇವರ ದೂರಿನ ದಿನಾಂಕ : 14–12–2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 415 ಎಲ್‌ಸಿಎಲ್ 2011, ದಿನಾಂಕ : 16–01–2012.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರ ಪತ್ರ ದಿನಾಂಕ : 25–03–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 14–12–2011ರ ಪತ್ರದಲ್ಲಿ ಶ್ರೀ ಕೆ.ಎಸ್. ಅನಿಲ್, ಗವಿಪುರಂ ಅಂಚೆ, ಬೆಂಗಳೂರು ಇವರು ಮಾನ್ಯ ಕಾನೂನು ಸಚಿವರಿಗೆ ದೂರು ಮನವಿಯನ್ನು ಸಲ್ಲಿಸಿ, ಹೊಳೆನರಸೀಪುರ, ಹಾಸನ ಜಿಲ್ಲೆಯಲ್ಲಿ ನೋಟರಿ ಮತ್ತು ವಕೀಲಿ ವೃತ್ತಿ ನಡೆಸುತ್ತಿರುವ ಶ್ರೀ ಅಬ್ದುಲ್ ರವೂಫ್ ಎಂಬುವವರು ಸರ್ಕಾರ/ ಇಲಾಖೆ ನೀಡಿದ ನೋಟರಿ ಮತ್ತು ವಕೀಲಿ ಪರವಾನಗಿಯನ್ನು ದುರುಪಯೋಗಿಸಿಕೊಂಡು ಸುಳ್ಳು ಪ್ರಮಾಣ ಪತ್ರ/ಫೋರ್ಜರಿ ಪ್ರಮಾಣ ಪತ್ರ ನೀಡಿರುತ್ತಾರೆಂದು ತಿಳಿಸಿರುತ್ತಾರೆ.

ಓದಲಾದ (2)ರ ಸರ್ಕಾರದ ಪತ್ರ ದಿನಾಂಕ : 16–01–2012 ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರಿಗೆ ಪತ್ರ ಬರೆದು ಶ್ರೀ ಕೆ.ಎಸ್. ಅನಿಲ್ ಇವರಿಂದ ಸ್ವೀಕೃತವಾದ ದೂರು ಮನವಿ ಹಾಗೂ ಅಡಕಗಳನ್ನು ಕಳುಹಿಸಿ, ನೋಟರಿ ನಿಯಮಾನುಸಾರ ತನಿಖೆ ನಡೆಸಿ, ನೋಟರಿಗಳ ನಿಯಮಗಳು 1956ರ ನಿಯಮ 13(11)ರನ್ವಯ ವಿಚಾರಣಾ ವರದಿಯನ್ನು ಕಳುಹಿಸುವಂತೆ ಕೋರಲಾಗಿತ್ತು.

ಸದರಿ ಶ್ರೀ ಕೆ.ಎಸ್. ಅನಿಲ್ ಇವರು ತಮ್ಮ ದೂರಿನಲ್ಲಿ ಇವರ ತಂದೆ ಶ್ರೀ ಕೆ.ಜೆ. ಸ್ವಾಮಿಗೌಡ ಮತ್ತು ಅಣ್ಣನಾದ ಶ್ರೀ ಕೆ.ಎಸ್. ಸುನೀಲ್ ಇವರುಗಳು ಕೂಡಿಕೊಂಡು, ತಮ್ಮ ಹಾಗೂ ತಮ್ಮ ಅಕ್ಕತಂಗಿಯರ ಹೆಸರುಗಳನ್ನು ಫೋರ್ಜರಿ ಸಹಿ ಮಾಡಿ ಖಾತೆ ಬದಲಾವಣೆ ಮಾಡಿದ್ದು. ಅದರಲ್ಲಿ ನೋಟರಿಯವರಾದ ಶ್ರೀ ಅಬ್ದುಲ್ ರವೂಫ್ ಇವರೂ ಸಹ ಶಾಮೀಲಾಗಿರುತ್ತಾರೆಂದು ಆಪಾದಿಸಿರುವ ಹಿನ್ನೆಲೆಯಲ್ಲಿ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರು ಸದರಿ ಶ್ರೀ ಅಬ್ದುಲ್ ರವೂಫ್, ನೋಟರಿ ಇವರಿಗೆ ನೋಟೀಸನ್ನು ಜಾರಿ ಮಾಡಿ ಲಿಖಿತ ಹೇಳಿಕೆಯನ್ನು ಕೋರಿದ್ದು, ಸದರಿ ನೋಟರಿಯವರು ತಮ್ಮ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧದ ಹೇಳಿಕೆಯನ್ನು ಅಲ್ಲಗಳೆದಿರುತ್ತಾರೆ ಹಾಗೂ ಖಾತೆ ಮಾಡುವಲ್ಲಿ ಅವರಿಂದ ಯಾವುದೇ ತಪ್ಪು ನಡೆದಿಲ್ಲವೆಂದೂ, ದೂರುದಾರರಿಗೆ ಯಾವುದೇ ರೀತಿಯಲ್ಲಿ ಹಾನಿಯಾಗಿರುವುದಿಲ್ಲವೆಂದೂ, ಖಾತೆ ಮಾಡುವ ಸಮಯದಲ್ಲಿ ಸಹಿಗಳನ್ನು ಮಾಡಿರುವವರೆಲ್ಲರನ್ನೂ ಗುರುತಿಸಲಾಗಿತ್ತೆಂದೂ ಹಾಗೂ ಖಾತೆ ಬದಲಾವಣೆಯು 2006ರಲ್ಲಿ ಮಾಡಿರುವುದರಿಂದ, ಈಗ ಸಹಿ ಮಾಡಿರುವವರ ಗುರುತು ಮರೆತಿರುವುದಾಗಿ ತಿಳಿಸಿರುತ್ತಾರೆ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರು ಮೇಲೆ ಓದಲಾದ (3)ರ ದಿನಾಂಕ : 25–03–2013ರ ತಮ್ಮ ವರದಿಯಲ್ಲಿ ಅಫಿಡವಿಟ್‌ನಲ್ಲಿ ಮಾಡಿರುವ ಸಹಿಗಳು ಬರಿಯ ಕಣ್ಣಿಗೆ ಎಲ್ಲವನ್ನೂ ಒಬ್ಬರೇ ಒಂದೇ ಪೆನ್ನಿನಿಂದ ಮಾಡಿರುವಂತೆ ಕಾಣುವುದರಿಂದ, ಶ್ರೀ ಅಬ್ದುಲ್ ರವೂಫ್, ನೋಟರಿಯವರು ತಮ್ಮ ಕಾರ್ಯ ನಿರ್ವಹಿಸುವಲ್ಲಿ ಕರ್ತವ್ಯಚ್ಯುತಿಯನ್ನು ಎಸಗಿದ್ದಾರೆಂಬುದು ಆಗಿರುತ್ತದೆ. ಕಾನೂನಿನ ಪ್ರಕಾರ ಪ್ರತಿಯೊಬ್ಬ ನೋಟರಿಯು ತಮ್ಮ ಮುಂದೆ ಹಾಜರು ಮಾಡಿ ದಾಖಲೆಗಳ ವಿವರಗಳನ್ನು ನಿಗದಿತ ನಮೂನೆಯಲ್ಲಿ ನಮೂದಿಸುವುದು ಹಾಗೂ ಪ್ರತಿಯೊಬ್ಬ ವ್ಯಕ್ತಿಯನ್ನು ಗುರುತಿಸುವುದು ಕಡ್ಡಾಯವಾಗಿರುವಾಗ, ಅರ್ಜಿದಾರರಿಂದ ನೋಟರಿ ರಿಜಿಸ್ಟರ್‌ನಲ್ಲಿ ಸಹಿಯನ್ನು ತೆಗೆದುಕೊಳ್ಳದೆ ಇರುವುದು ನೋಟರಿ ನಿಯಮಾವಳಿಗಳ ಉಲ್ಲಂಘನೆಯಾಗಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 415 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 29-08-2013.**

ಶ್ರೀ ಅಬ್ದುಲ್ ರವೂಫ್, ನೋಟರಿ, ಹಾಸನ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ನೋಟರಿ ರಿಜಿಸ್ಟ್ರರ್‌ನಿಂದ ಇವರ ಹೆಸರನ್ನು ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 875

SC-15

**ಟಿ.ಕೆ. ಲಕ್ಷ್ಮಿನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಗುಲ್ಬರ್ಗಾದಲ್ಲಿ ಹೊಸದಾಗಿ ಸರ್ಕಾರಿ ಫಾರ್ಮಸಿ ಕಾಲೇಜು ಪ್ರಾರಂಭಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ಪತ್ರ ಸಂಖ್ಯೆ : ಔನಿಇ : 42 : ಯೋಜನೆ/2013-14, ದಿನಾಂಕ : 26-07-2013.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು 2013-14ನೇ ಸಾಲಿನ ಆಯವ್ಯಯ ಭಾಷಣದಲ್ಲಿ **ಗುಲ್ಬರ್ಗಾದಲ್ಲಿ ಹೊಸದಾಗಿ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಪ್ರಾರಂಭಿಸುವ** ಘೋಷಣೆಗೆ ಅನುಗುಣವಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಗುಲ್ಬರ್ಗಾದಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿರುವ ಹೊಸ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯದಲ್ಲಿ ಈ ಕೆಳಕಂಡ ಕೋರ್ಸ್‌ಗಳನ್ನು ಸ್ಥಾಪಿಸಲು ಪ್ರಸ್ತಾಪಿಸಿರುತ್ತಾರೆ :-

| ಕ್ರ. ಸಂ. | ಕೋರ್ಸ್‌ನ ಹೆಸರು | ಕೋರ್ಸ್‌ನ ಕಾಲಾವಧಿ |
|---|---|---|
| 1. | ಫಾರ್ಮ್-ಡಿ | 06 ವರ್ಷಗಳು |
| 2. | ಫಾರ್ಮ್-ಡಿ (ಪೋಸ್ಟ್ ಬ್ಯಾಕ್ಯುಲರೇಟ್) | 02 ವರ್ಷಗಳು |
| 3. | ಎಂ-ಫಾರ್ಮ್ | 02 ವರ್ಷಗಳು |
| 4. | ಬಿ-ಫಾರ್ಮ್ | 04 ವರ್ಷಗಳು |
| 5. | ಡಿ-ಫಾರ್ಮ್ | ವರ್ಷಗಳು |

ಪ್ರಥಮ ವರ್ಷದಲ್ಲಿ ಬಿ-ಫಾರ್ಮ್ ಹಾಗೂ ಡಿ-ಫಾರ್ಮ್ ಕೋರ್ಸ್‌ಗಳನ್ನು ಪ್ರಾರಂಭಿಸಬಹುದಾಗಿದ್ದು, ಇದಕ್ಕಾಗಿ ಫಾರ್ಮಸಿ ಕೌನ್ಸಿಲ್ ಆಫ್ ಇಂಡಿಯಾ, ನವದೆಹಲಿ ಹಾಗೂ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್, ನವದೆಹಲಿ ಇವರಿಂದ ಅನುಮೋದನೆ ಪಡೆಯುವ ಅಗತ್ಯತೆ ಬಗ್ಗೆ ಪ್ರಸ್ತಾಪಿಸುತ್ತಾ, ಪ್ರಥಮ ವರ್ಷದಲ್ಲಿ ತಾತ್ಕಾಲಿಕವಾಗಿ ಬಾಡಿಗೆ ಕಟ್ಟಡದಲ್ಲಿ ಕೋರ್ಸ್‌ಗಳನ್ನು ಪ್ರಾರಂಭಿಸಬಹುದಾಗಿದ್ದು. ವಿದ್ಯಾಲಯದ ಕಾರ್ಯ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ನಿರ್ವಹಿಸಲು ಹಾಗೂ ಯೋಜನೆಯನ್ನು ಸಮರ್ಥವಾಗಿ ಕಾರ್ಯಗತಗೊಳಿಸಲು ಯೋಜನೆ ನಿರ್ದೇಶಕರನ್ನು (ಪ್ರಾಜೆಕ್ಟ್ ಡೈರೆಕ್ಟರ್) ನೇಮಿಸಿ ಆದೇಶ ಹೊರಡಿಸುವಂತೆ ಹಾಗೂ 113 ತಾಂತ್ರಿಕ ಹಾಗೂ 45 ತಾಂತ್ರಿಕೇತರ ಹುದ್ದೆಗಳನ್ನೊಳಗೊಂಡಂತೆ ಒಟ್ಟು 158 ಅಗತ್ಯವಿರುವ ವಿವಿಧ ಹುದ್ದೆಗಳನ್ನು ಸೃಜಿಸಲು ಪ್ರಸ್ತಾಪಿಸಿರುತ್ತಾರೆ.

ಹೊಸದಾಗಿ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಪ್ರಾರಂಭಿಸುವುದಕ್ಕಾಗಿ ರೂ. 1800.00 ಲಕ್ಷಗಳ ಅನಾವರ್ತಕ ವೆಚ್ಚ ರೂ. 800.00 ಲಕ್ಷಗಳ ಆವರ್ತಕ ವೆಚ್ಚವಾಗುವುದಾಗಿ ಅಂದಾಜಿಸುತ್ತಾ, ಕನಿಷ್ಠ 10 ರಿಂದ 15 ಎಕರೆಗಳ ಸ್ಥಳಾವಕಾಶದ ಅಗತ್ಯತೆ ಇದ್ದು, ಸೂಕ್ತ ಸ್ಥಳಾವಕಾಶ ಒದಗಿಸಲು ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 383 ಪಿಟಿಡಿ 2012, ಬೆಂಗಳೂರು, ದಿನಾಂಕ : 31–08–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿನ ಘೋಷಣೆಯಂತೆ ಗುಲ್ಬರ್ಗಾದಲ್ಲಿ ಹೊಸದಾಗಿ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಪ್ರಾರಂಭಿಸುವ ಪ್ರಸ್ತಾವನೆಗೆ ಸೂಕ್ತ ಯೋಜನಾ ವರದಿಯನ್ನು ಹಾಗೂ ಅಂದಾಜು ಪಟ್ಟಿಯನ್ನು ತಯಾರಿಸಿ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆಯುವ ಷರತ್ತಿಗೊಳ್ಳಪಟ್ಟು ತಾತ್ವಿಕ (In principle) ಮಂಜೂರಾತಿ ನೀಡಿದೆ.

ಈ ಆದೇಶವನ್ನು ದಿನಾಂಕ : 17–08–2013 ರಂದು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಯೋಇ/42/ಜಶ/2013 ರಲ್ಲಿ ಹಾಗೂ ದಿನಾಂಕ : 30–08–2013ರಂದು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 830 ವೆಚ್ಚ–5/2013 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್. ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ).

**PR. 876**

**SC-50**

## ಕಾರ್ಮಿಕ ಸಚಿವಾಲಯ

### ತಿದ್ದುಪಡಿ

**ವಿಷಯ** : ಕಾರ್ಮಿಕ ಇಲಾಖೆಯ ಶ್ರೀ ಶೇಖ್ ಸಮೀವುಲ್ಲಾ ಷರೀಫ್, ಸಹಾಯಕ ಕಾರ್ಮಿಕ ಆಯುಕ್ತರು, ಇವರ ವಿರುದ್ಧ ದಾಖಲಾದ 'ಅಕ್ರಮ ಆಸ್ತಿ ಹೊಂದಿರುವ' ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

ಸರ್ಕಾರದ ಆದೇಶ ಸಂಖ್ಯೆ : ಕಾಇ 40 ಎಲ್ಇಟಿ 2013, ದಿನಾಂಕ : 10–05–2013ರ ಪ್ರಸ್ತಾವನೆಯ ಭಾಗದಲ್ಲಿ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

1. ಪುಟ–1, 2ನೇ ಕಂಡಿಕೆಯ 2ನೇ ಸಾಲಿನಲ್ಲಿ "ಪೊಲೀಸ್ ನಿರೀಕ್ಷಕರು" ಎಂಬುದರ ಬದಲು "ಪೊಲೀಸ್ ಉಪಾಧೀಕ್ಷಕರು" ಎಂದು
2. ಪುಟ–3 ಕ್ರಮ ಸಂಖ್ಯೆ : 16 ರಲ್ಲಿ "ರೂ. 13,433–00" ಎಂಬುದರ ಬದಲು "ರೂ. 13443–00" ಎಂದು
3. ಪುಟ–7 2ನೇ ಕಂಡಿಕೆಯ ಮೊದಲನೇ ಸಾಲಿನಲ್ಲಿ "ಕೃಷ್ಣ ಕೆ.ಎಲ್. ಪೊಲೀಸ್ ಇನ್ಸ್‌ಪೆಕ್ಟರ್" ಎಂಬುದರ ಬದಲು "ಎಂ.ಸಿ. ಬೂದಿಹಾಳ, ಪೊಲೀಸ್ ಉಪಾಧೀಕ್ಷಕರು" ಎಂದು
4. ಪುಟ–9 ಮೊದಲನೇ ಕಂಡಿಕೆಯ 2ನೇ ಸಾಲಿನಲ್ಲಿ "ರೂ. 1,43,40.000" ಎಂಬುದರ ಬದಲು "ರೂ. 1,24,58,416" ಎಂದು
5. ಪುಟ–9 2ನೇ ಕಂಡಿಕೆಯ 5ನೇ ಸಾಲಿನಲ್ಲಿ "ಕಲಂ 19(1)(ಸಿ)" ಎಂಬುದರ ಬದಲು "ಕಲಂ 19(1)(ಬಿ) ಎಂದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**PR. 877**

**SC-25**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 58 ಕಾಬಾಸೇ 2013, ಬೆಂಗಳೂರು, ದಿನಾಂಕ : 29–08–2013.**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಸಾರ್ವತ್ರಿಕ ವರ್ಗಾವಣೆ ನಡೆವಳಿಗಳ ಸಂ : ಕಾಇ 58 ಕಾಬಾಸೇ 2013, ದಿನಾಂಕ : 10–07–2013ರ ಕ್ರ. ಸಂ. 7, 8 & 9 ರಲ್ಲಿ ಕ್ರಮವಾಗಿ ಶ್ರೀ ಆರ್.ಕೆ. ಪಾರ್ಥಸಾರಥಿ ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ ಹುದ್ದೆಯಿಂದ ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6 ಬೆಂಗಳೂರು ಹುದ್ದೆಗೆ, ಶ್ರೀ ಎ.ಜೆ. ಸತೀಶ್‌ಬಾಬು ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6 ಬೆಂಗಳೂರು ಹುದ್ದೆಗೆ ಶ್ರೀ ಎ.ಜೆ. ಸತೀಶ್ ಬಾಬು ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6 ಬೆಂಗಳೂರು ಹುದ್ದೆಯಿಂದ ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7 ಬೆಂಗಳೂರು ಹುದ್ದೆಗೆ ಹಾಗೂ ಶ್ರೀ ಎಂ.ಎಸ್. ಮಹಾದೇವ್ ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7 ಬೆಂಗಳೂರು ಹುದ್ದೆಯಿಂದ ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ ಹುದ್ದೆಗೆ ವರ್ಗಾಯಿಸಿ ಅಧಿಸೂಚನೆಯನ್ನು

ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆ ಹಾಗೂ ಇಲಾಖಾ ಮುಖ್ಯಸ್ಥರ ಆದೇಶಗಳನ್ವಯ ಶ್ರೀ ಆರ್.ಕೆ. ಪಾರ್ಥಸಾರಥಿ ರವರು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6 ಬೆಂಗಳೂರು ಕಛೇರಿಯ ಕಾರ್ಯಭಾರವನ್ನು ಹಾಗೂ ಶ್ರೀ ಎ.ಜೆ. ಸತೀಶ್‌ಬಾಬು ರವರು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7 ಬೆಂಗಳೂರು ಕಛೇರಿಯ ಕಾರ್ಯಭಾರವನ್ನು ವಹಿಸಿಕೊಂಡಿದ್ದು, ಶ್ರೀ ಎಂ.ಎಸ್. ಮಹಾದೇವ್ ರವರು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ ಕಛೇರಿಯ ಕಾರ್ಯಭಾರವನ್ನು ವಹಿಸಿಕೊಳ್ಳದೆ. ಅವರನ್ನು ವರ್ಗಾವಣೆ ಮಾಡಿರುವುದನ್ನು ಅಸಿಂಧುಗೊಳಿಸುವಂತೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಮಾನ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಶ್ರೀ ಎ.ಜೆ. ಸತೀಶ್‌ಬಾಬು ರವರನ್ನು ಹಾಗೂ ಶ್ರೀ ಆರ್.ಕೆ. ಪಾರ್ಥಸಾರಥಿ ರವರುಗಳನ್ನು ಕ್ರಮವಾಗಿ 1, 2 ಹಾಗೂ 3 ನೇ ಪ್ರತಿವಾದಿಗಳನ್ನಾಗಿಸಿ ಅರ್ಜಿ ಸಲ್ಲಿಸಿರುತ್ತಾರೆ. ಅವರ ಅರ್ಜಿಯನ್ನು ಪರಿಶೀಲಿಸಿದ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿದಾರರ ವರ್ಗಾವಣೆಗೆ ತಡೆಯಾಜ್ಞೆ ಹೊರಡಿಸಿ ಅರ್ಜಿದಾರರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7 ಬೆಂಗಳೂರು ಹುದ್ದೆಯಲ್ಲಿ ಮುಂದುವರೆಸುವಂತೆ ಹಾಗೂ 2ನೇ ಪ್ರತಿವಾದಿಯಾದ ಶ್ರೀ ಎ.ಜೆ. ಸತೀಶ್‌ಬಾಬು ರವರನ್ನು ಹಿಂದಿನ ಹುದ್ದೆಗೆ ಹಿಂದಿರುಗುವಂತೆ ಆದೇಶಿಸಿರುತ್ತದೆ. ಸದರಿ ಆದೇಶದನ್ವಯ 1ನೇ ಪ್ರತಿವಾದಿಯಾದ ಮಾನ್ಯ ಕಾರ್ಯದರ್ಶಿಗಳು ಪ್ರಸ್ತುತ ಪರಿಸ್ಥಿತಿಯ ಸಾಧಕ–ಬಾಧಕಗಳನ್ನು ಅವಲೋಕಿಸಿ ಸೂಕ್ತವಾದ ಕಾರ್ಯ ವ್ಯವಸ್ಥೆಯ ಆದೇಶವನ್ನು ಮಾಡುವ ಮೊದಲೇ 2ನೇ ಪ್ರತಿವಾದಿಯಾದ ಶ್ರೀ ಎ.ಜೆ. ಸತೀಶ್‌ಬಾಬು ರವರು ಅರ್ಜಿದಾರರಾದ ಶ್ರೀ ಎಂ.ಎಸ್. ಮಹಾದೇವ್‌ರವರಿಗೆ ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7 ಬೆಂಗಳೂರು ಕಛೇರಿಯ ಕಾರ್ಯಭಾರವನ್ನು ವಹಿಸಿಕೊಟ್ಟಿದ್ದುದರಿಂದ ಶ್ರೀ ಎ.ಜೆ. ಸತೀಶ್‌ಬಾಬು ರವರಿಗೆ ಯಾವುದೇ ಹುದ್ದೆಯ ಲೀನ್ ಇಲ್ಲದೆ ಸ್ಥಳ ನಿಯುಕ್ತಿ ನಿರೀಕ್ಷೆಯಲ್ಲಿ ಉಳಿಯುವಂತಹ ಪರಿಸ್ಥಿತಿ ನಿರ್ಮಾಣವಾಗಿರುತ್ತದೆ. ಮಾನ್ಯ ಆಡಳಿತ ನ್ಯಾಯ ಮಂಡಳಿಯು ತಡೆಯಾಜ್ಞೆಯನ್ನು ಅರ್ಜಿದಾರರ ಹಿತ ದೃಷ್ಟಿಯಿಂದ ನೀಡಿದ್ದು, ಅರ್ಜಿದಾರರಾದ ಶ್ರೀ ಎಂ.ಎಸ್. ಮಹಾದೇವ್‌ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–7, ಬೆಂಗಳೂರು ಹುದ್ದೆಯಲ್ಲಿ ಮುಂದುವರೆಸಬೇಕಾಗಿರುತ್ತದೆ. ಆದರೆ 2ನೇ ಪ್ರತಿವಾದಿಯಾದ ಶ್ರೀ ಎ.ಜೆ. ಸತೀಶ್‌ಬಾಬು ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–6, ಬೆಂಗಳೂರು ಹುದ್ದೆಗೆ ವರ್ಗಾವಣೆ ಮಾಡಲು ಅವಕಾಶವಿರುವುದಿಲ್ಲ. ಕಾರಣ ಸದರಿ ಹುದ್ದೆಯ ಕಾರ್ಯಭಾರವನ್ನು ಶ್ರೀ ಆರ್.ಕೆ. ಪಾರ್ಥಸಾರಥಿ ರವರು ಶ್ರೀ ಎ.ಜೆ. ಸತೀಶ್‌ಬಾಬು ರವರಿಂದ ದಿನಾಂಕ : 15–07–2013 ರಂದೇ ಪಡೆದು ಅಂದಿನಿಂದ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಶ್ರೀ ಎ.ಜೆ. ಸತೀಶ್‌ಬಾಬು ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–6, ಬೆಂಗಳೂರು ಹುದ್ದೆಗೆ ವರ್ಗಾಯಿಸಲು ಶ್ರೀ ಆರ್.ಕೆ. ಪಾರ್ಥಸಾರಥಿ ರವರನ್ನು ಸದರಿ ಹುದ್ದೆಯಿಂದ ಬೇರೆಡೆಗೆ ವರ್ಗಾಯಿಸಿದಲ್ಲಿ ಸದರಿ ವರ್ಗಾವಣೆ ಅವಧಿ ಪೂರ್ವ ವರ್ಗಾವಣೆಯಾಗಿ ಪರಿಣಮಿಸಿ, ಸರ್ಕಾರದ ವರ್ಗಾವಣೆ ಮಾರ್ಗ ಸೂಚಿಗಳನ್ವಯ ಉಲ್ಲೇಖಿಸಿದಂತೆ 9(ಅ)ಕ್ಕೆ ವ್ಯತಿರಿಕ್ತವಾಗಿರುತ್ತದೆ. ಈ ಮೇಲಿನ ಸಂಬಂಧ ಶ್ರೀ ಆರ್.ಕೆ. ಪಾರ್ಥಸಾರಥಿ ರವರನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6 ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರೆಸುವಂತೆ ಮಾನ್ಯ ಮುಖ್ಯ ಮಂತ್ರಿಗಳು ಸಹ ಆದೇಶಿಸಿರುತ್ತಾರೆ.

ಮೇಲೆ ಹೇಳಿದ ಅಂಶಗಳ ಹಿನ್ನೆಲೆಯಲ್ಲಿ ಸ್ಥಳನಿಯುಕ್ತಿ ನಿರೀಕ್ಷೆಯಲ್ಲಿರುವ ಶ್ರೀ ಎ.ಜೆ. ಸತೀಶ್‌ಬಾಬು, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆ ಇವರಿಗೆ ಈ ಕೆಳಗಿನಂತೆ ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು, ಪದನಾಮ ಹಾಗೂ ಸ್ಥಳ | ಸ್ಥಳ ನಿಯುಕ್ತಿಗೊಳಿಸಲಾದ ಸ್ಥಳ |
|---|---|---|
| 1. | ಶ್ರೀ ಎ.ಜೆ. ಸತೀಶ್‌ಬಾಬು, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, (ಸ್ಥಳ ನಿಯುಕ್ತಿ ನಿರೀಕ್ಷೆಯಲ್ಲಿರುವ) | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ ಇಲ್ಲಿ ಶ್ರೀ ಆರ್.ಕೆ. ಪಾರ್ಥಸಾರಥಿ, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಇವರ ವರ್ಗಾವಣೆಯಿಂದ ತೆರವಾದ ಸ್ಥಳ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 878**

**SC-25**

**ಬಿ. ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಸೃಜಿಸಲಾಗಿರುವ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹಾಗೂ ಲೀಗಲ್ ಆಫೀಸರ್ ಹುದ್ದೆಗಳಿಗೆ ನೇಮಕಾತಿ ಹಾಗೂ ಮುಂಬಡ್ತಿ ವಿಧಾನಗಳನ್ನು ನಿಗದಿಪಡಿಸಲು ಕಾರ್ಯಕಾರಿ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010, ದಿನಾಂಕ : 25-02-2011.
2. ಆದೇಶ ಸಂಖ್ಯೆ : ಇಎನ್ 47 ಇಬಿಎಸ್ 2010, ದಿನಾಂಕ : 29-06-2012.
3. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 96, ದಿನಾಂಕ : 01-08-1996.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 25-02-2011ರ ಸರ್ಕಾರಿ ಆದೇಶದಲ್ಲಿ ಒಂದು ಲೀಗಲ್ ಆಫೀಸರ್ ಹುದ್ದೆಯನ್ನು ಹಾಗೂ ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 29-06-2012ರ ಆದೇಶದಲ್ಲಿ ಐದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು ಸೃಜಿಸಲಾಯಿತು. ಲೀಗಲ್ ಆಫೀಸರ್ ಹುದ್ದೆಯನ್ನು ನಿಯೋಜನೆಯ ಮೇಲೆ ತೆಗೆದುಕೊಳ್ಳಲು ಪ್ರಸ್ತಾಪಿಸಲಾಗಿದೆ. ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಿಂದ ಬಡ್ತಿಯ ಮೇಲೆ ತುಂಬಲು ಪ್ರಸ್ತಾಪಿಸಲಾಗಿದೆ. ಈ ಎರಡು ಹುದ್ದೆಗಳು ಹೊಸದಾಗಿ ಸೃಜಿಸಿರುವುದರಿಂದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿರುವುದಿಲ್ಲ. ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನೇಮಕಾತಿ ವಿಧಾನ ನಿಗಧಿಪಡಿಸದೆ ಇರುವ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಒಂದು ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 01-08-1996ರ ಅಧಿಕೃತ ಜ್ಞಾಪನದಲ್ಲಿ ಕಲ್ಪಿಸಲಾಗಿದೆ. ಈ ಎರಡು ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಕಾಲಾವಕಾಶ ಬೇಕಾಗಿರುವುದರಿಂದ ಈ ಹುದ್ದೆಗಳನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010 (ಭಾಗ-2) ಬೆಂಗಳೂರು, ದಿನಾಂಕ : 07-08-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ರೂ. 28100-50100 ವೇತನ ಶ್ರೇಣಿಯ ಲೀಗಲ್ ಆಫೀಸರ್ ಹುದ್ದೆ ಮತ್ತು ರೂ. 44250-60600 ವೇತನ ಶ್ರೇಣಿಯು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳಿಗೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ : 01-08-1996 ರ ಅಧಿಕೃತ ಜ್ಞಾಪನದ ಅನ್ವಯ ಈ ಕೆಳಕಂಡ ಷರತ್ತು ಹಾಗೂ ನಿಬಂಧನೆಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗಧಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಅವರ 01-08-2013 ರ ದಿನಾಂಕದ ಟಿಪ್ಪಣಿ ಸಂಖ್ಯೆ : ಸಿಆಸುಇ 89 ಸೇನಿಡಿ 2013 ರಲ್ಲಿ ನೀಡಿದ ಅನುಮೋದನೆ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ (ವಿದ್ಯುಚ್ಛಕ್ತಿ)

### ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010 (ಭಾಗ-2) ದಿನಾಂಕ : 07-08-2013.**

| ಕ್ರ. ಸಂ. | ಹುದ್ದೆಯ ಪದನಾಮ ಮತ್ತು ವೇತನ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|
| 1. | ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು, ರೂ. 44250-60600 | 5 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಿಂದ ಬಡ್ತಿ | ಬಡ್ತಿ ಹೊಂದಲು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಕನಿಷ್ಠ 3 ವರ್ಷಗಳ ಸೇವೆಯನ್ನು ಸಲ್ಲಿಸಿರಬೇಕು. |
| 2. | ಲೀಗಲ್ ಆಫೀಸರ್ ರೂ. 28100-50100 | 1 | ಹಿರಿಯ ಸಹಾಯಕ ಅಭಿಯೋಜಕರ ಹುದ್ದೆಯಿಂದ ಅಭಿಯೋಗ ಮತ್ತು ಸರ್ಕಾರದ ವ್ಯಾಜ್ಯಗಳ ಇಲಾಖೆ ಯಿಂದ ನಿಯೋಜನೆ | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕ ಹುದ್ದೆಯಲ್ಲಿ ಕನಿಷ್ಠ ಒಂದು ವರ್ಷ ಸೇವೆ ಸಲ್ಲಿಸಿರಬೇಕು. |

**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ (ವಿದ್ಯುಚ್ಛಕ್ತಿ)

PR. 879
SC-50

## ಒಳಾಡಳಿತ ಸಚಿವಾಲಯ

**ವಿಷಯ** : ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09–03–2012.
2. ದಿನಾಂಕ : 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 05–08–2013.

**ಪ್ರಸ್ತಾವನೆ :**

ದಿನಾಂಕ : 02–03–2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ : 02–07–2013, 03–07–2013, 16–07–2013, 17–07–2013, 19–07–2013, 22–07–2013 ಮತ್ತು 27—7–2013, 6 ಮಹತ್ವದ ದಿನಗಳು ಹಾಗೂ ದಿನಾಂಕ : 22–07–2013ರ ಮಹತ್ವವಲ್ಲದ ದಿನದಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 66,000/– (ಅರವತ್ತಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ : 17–08–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (6 days) dated, 02-07-2013, 03-07-2013, 16-07-2013, 17-07-2013, 19-07-2013 ಮತ್ತು 27-07-2013.<br>@ Rs. 10,000/- per day | 60,000–00 |
| 2. | Non-effective hearing one day 22-07-2013 @ Rs. 6,000/-per day | 6,000–00 |
| | **ಒಟ್ಟು ಮೊತ್ತ (ಅರವತ್ತಾರು ಸಾವಿರಗಳು ಮಾತ್ರ)** | **66,000–00** |

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ) ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 888**

**SC-50**

**ದೇವೇಂದ್ರಪ್ಪ ಕಟ್ಟೀಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಶಿಕ್ಷಣ ಸಚಿವಾಲಯ

**ವಿಷಯ** : 2013–14ನೇ ಸಾಲಿಗೆ ಬಿ.ಸಿ.ಎ., ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ ಎಂ.ಸಿ.ಎ. 2ನೇ ವರ್ಷಕ್ಕೆ ಪ್ರವೇಶ ಪ್ರಕ್ರಿಯೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ನಡೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 101 ಟಿಇಸಿ 2005, ದಿನಾಂಕ : 21–05–2005.
2. 2013–14ನೇ ಸಾಲಿನ ಎಐಸಿಟಿಇ ಮಾರ್ಗಸೂಚಿ ಹಾಗೂ ಪತ್ರ ಸಂಖ್ಯೆ : 1-8/PC/AICTE/Elig. Deg. & PG Dip/2011/305 ದಿನಾಂಕ : 16–07–2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮೊದಲನೇ ವರ್ಷದ ಎಂ.ಬಿ.ಎ.,/ಎಂ.ಸಿ.ಎ. ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ Karnataka Selection of Candidates for Admission to MBA and MCA Courses Rules, 2005 ನ್ನು ಹೊರಡಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ 2013–14ನೇ ಸಾಲಿನ ಎಐಸಿಟಿಇ ಮಾರ್ಗಸೂಚಿ ಹಾಗೂ ಎಐಸಿಟಿಇ ಪತ್ರ ದಿನಾಂಕ : 16–07–2013ರನ್ವಯ 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಈ ಕೆಳಕಂಡ ಶೈಕ್ಷಣಿಕ ಅರ್ಹತೆ ಹೊಂದಿರುವ ಅಭ್ಯರ್ಥಿಗಳಿಗೆ ನೇರ ಪ್ರವೇಶಾವಕಾಶ ಕಲ್ಪಿಸಲಾಗಿದೆ.

"Provided that Students who have completed Bachelor's Degree of minimum 3 yrs. Duration in BCA, B.Sc. (IT/Computer Science) with Mathematics as a course at 10+2 level or at Graduate level shall be eligible for admission to second year MCA courses up to a maximum of 20% of sanctioned intake except Andaman, Nicobar, Lakshadweep, Daman and Diu where it shall be 30% which will be the supernumerary of the approved intake"

"The eligible candidates seeking admission to 2nd year MCA will be required to quality at the Entrance Test conducted by the competent authority".

ಮೇಲಿನ ಅಂಶಗಳಂತೆ ಸರ್ಕಾರವು ಪರಿಶೀಲಿಸಿ ಬಿ.ಸಿ.ಎ. ಹಾಗೂ ಬಿ.ಎಸ್ಸಿ, (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಎಂ.ಸಿ.ಎ. 2ನೇ ವರ್ಷಕ್ಕೆ ಲ್ಯಾಟರಲ್ ಎಂಟ್ರಿ ಮೂಲಕ ಶೇ 20ರಷ್ಟು ಸೀಟುಗಳಿಗೆ ನೇರ ಪ್ರವೇಶಾತಿ ನೀಡುವ ಕುರಿತು Karnataka Selection of Candidates for Admission to MBA and MCA Courses Rules, 2005ಕ್ಕೆ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಎಐಸಿಟಿಇ ಮಾರ್ಗಸೂಚಿಯಂತೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ 2013–14ನೇ ಸಾಲಿಗೆ ಬಿ.ಸಿ.ಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಪ್ರತ್ಯೇಕ ಪ್ರವೇಶ ಪರೀಕೆ ನಡೆಸ್ಸಿ (PGCET) ಅದರಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳಿಗೆ ಪ್ರವೇಶಾತಿಯನ್ನು ನೀಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 98 ಟಿಇಸಿ 2013, ಬೆಂಗಳೂರು, ದಿನಾಂಕ : 22ನೇ ಆಗಸ್ಟ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿಗೆ ಬಿ.ಸಿ.ಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಪ್ರವೇಶಾತಿ ನೀಡಲು Karnataka Selection of Candidates for Admission to MBA and MCA Courses Rules, 2005ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಈ ಕೆಳಕಂಡ ಷರತ್ತುಗಳೊಂದಿಗೆ ಅನುಮೋದನೆ ನೀಡಿದೆ.

1. ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ನೇರ ಪ್ರವೇಶ ಪಡೆಯಲಿಚ್ಚಿಸುವ ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಅಭ್ಯರ್ಥಿಗಳಿಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಪ್ರತ್ಯೇಕ ಪ್ರವೇಶ ಪರೀಕ್ಷೆ ನಡೆಸಿ, ಅದರಲ್ಲಿ ಅರ್ಹತೆ ಹೊಂದಿದವರಿಗೆ 2ನೇ ವರ್ಷ ಎಂ.ಸಿ. ಕೋರ್ಸಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.
2. ಎಂ.ಸಿ.ಎ. ಕೋರ್ಸಿಗೆ ಮಂಜೂರಾಗಿರುವ ಕಳೆದ ಸಾಲಿನ ಇಂಟೇಕ್‌ನ ಶೇ. 20ರಷ್ಟು ಸೀಟುಗಳನ್ನು ಸರ್ಕಾರಿ ಕೋಟಾದ ಸೀಟುಗಳೆಂದು ಪರಿಗಣಿಸಿ ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಹಂಚಿಕೆ ಮಾಡತಕ್ಕದ್ದು.
3. ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ನೇರ ಪ್ರವೇಶ ಪಡೆಯಲಿಚ್ಚಿಸುವ ಬಿ.ಸಿ.ಎ ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಅಭ್ಯರ್ಥಿಗಳು 10=2 ಅಥವಾ ಪದವಿಯಲ್ಲಿ ಗಣಿತ ವಿಷಯದೊಂದಿಗೆ ತೇರ್ಗಡೆ ಹೊಂದಿರತಕ್ಕದ್ದು.
4. ಎಐಸಿಟಿಇ ನಿಯಮಾವಳಿಯಂತೆ, ಅಭ್ಯರ್ಥಿಗಳು ಬಿ.ಸಿ.ಎ./ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವಿಯಲ್ಲಿ ಕನಿಷ್ಠ ಶೇ 50ರಷ್ಟು ಅಂಕ (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಶೇ. 45 ಅಂಕ) ಪಡೆದಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ನಾಗಭೂಷಣ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**PR. 894**

**SC-100**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸೂಗೂರೇಶ್ವರ, ಮಾಜಿ ಪಿಸಿ–559, 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್ 9ನೇ ಪಡೆ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಇವಿ(1)/05/2005–06 ದಿನಾಂಕ: 22.09.2006

2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/09/2008–09 ದಿನಾಂಕ 18.05.2009

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 05.10.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)44/2012–13 ದಿನಾಂಕ: 06.05.2013

**ಪ್ರಸ್ತಾವನೆ:**

ಶ್ರೀ ಸೂಗೂರೇಶ್ವರ, ಮಾಜಿ ಪಿಸಿ–559, ಕೇಂದ್ರ ದಳ, ಬೆಂಗಳೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಪೇದೆ ಸಂಖ್ಯೆ 559., ಶ್ರೀ ಸೂಗೂರೇಶ್ವರ, ಕೇಂದ್ರ ದಳ, 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ದಿನಾಂಕ 05.03.2005ರಿಂದ 07.03.2005ರವರೆಗೆ 3 ದಿನ ಸಾಂದರ್ಭಿಕ ರಜೆ ಮಂಜೂರು ಮಾಡಿಸಿಕೊಂಡು ದಿನಾಂಕ 08.03.2005 ಮತ್ತು 09.03.2005ರಂದು 2 ದಿವಸ ರಜೆ ವಿಸ್ತರಿಸಲು ಕೋರಿ ದಿನಾಂಕ 10.03.2005 ಮತ್ತು 11.03.2005 ರಂದು ಪುನಃ 2 ದಿವಸ ರಜೆ ವಿಸ್ತರಿಸಲು ಕೋರಿದ ಪ್ರಕಾರ ಒಟ್ಟು 7 ದಿವಸ ಸಾಂಧರ್ಬಿಕ ರಜೆ ಮಂಜೂರಾಗಿದ್ದು ದಿನಾಂಕ 12.03.2005 ರಿಂದ ಇಂದಿನವರೆಗೆ ರಜೆ ಮೀರಿನಿಂತು ಕರ್ತವ್ಯಕ್ಕೆ ಅವಧಿಕೃತವಾಗಿ ಗೈರು ಹಾಜರಾಗಿ ದುರ್ನಡತೆಯನ್ನು ಪ್ರದರ್ಶಿಸಿರುವಿರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಹಾಗೂ ಕಾರಣ ಕೇಳುವ ನೋಟಿಸ್‌ಗೆ ಅರ್ಜಿದಾರರು ಸಮಯಾವಕಾಶ ಕೋರಿರುತ್ತಾರೆ. ಆದರೆ ವೈದ್ಯಕೀಯ ತಪಾಸಣೆಗೆ ಹಾಜರಾಗದ ಕಾರಣ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್ 9ನೇ ಪಡೆ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22.09.2006ರ ಆದೇಶದಲ್ಲಿ ಗೈರು ಹಾಜರಿ ದಿನದಿಂದ ಅಂದರೆ ದಿನಾಂಕ: 12.03.2005ರಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದು ಹಾಕಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18.05.2009ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರಿಗೆ ಸಾಕಷ್ಟು ಅವಕಾಶಗಳನ್ನು ನೀಡಿದ್ದಾಗ್ಯೂ ಸಹ ಕರ್ತವ್ಯಕ್ಕೆ ಹಾಜರಾಗದೆ ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 108 ಪೊಸಿಅ 2012 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸೂಗೂರೇಶ್ವರ, ಮಾಜಿ ಪಿಸಿ–559, 9ನೇ ಪಡೆ ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR. 886
SC-30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವರದರಾಜು, ಮಾಜಿ ಪಿ.ಸಿ.–8871, ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಉತ್ತರ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: 17/ಡಿಇ/ಆರ್–6/ಡಿಸಿಪಿ/ಉ/2010 ದಿನಾಂಕ 12.01.2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 30/ಅಪೀಲು–1/2012 ದಿನಾಂಕ 21.06.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.09.2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)79/2012–13 ದಿನಾಂಕ: 17.04.2013

**ಪ್ರಸ್ತಾವನೆ:**

ಶ್ರೀ ವರದರಾಜು, ಮಾಜಿ ಪಿ.ಸಿ.–8871, ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ವರದರಾಜು, ಪಿ.ಸಿ.–8871, ಇವರು ಜೆ.ಸಿ. ನಗರ ಪೊಲೀಸ್ ಠಾಣೆಯಿಂದ ರಾಜಾಜಿನಗರ ಪೊಲೀಸ್ ಠಾಣೆಗೆ ವರ್ಗಾವಣೆಯಾಗಿದ್ದು, ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ ಹಾಗೂ ಈ ಹಿಂದೆ ಜೆ.ಸಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 26.06.2009ರಿಂದ ಇಂದಿನವರೆವಿಗೂ ಯಾವುದೇ ಮುನ್ಸೂಚನೆಯನ್ನು ನೀಡದೆ, ಎಂ.ಹೆಚ್.ಎಸ್. ಪುಸ್ತಕವನ್ನು ಪಡೆಯದೇ, ಯಾವುದೇ ರಜೆ ಮಂಜೂರಾತಿಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಅರ್ಜಿದಾರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಜ್ಞಾಪನಗಳನ್ನು ಹಾಗೂ ನಾಪತ್ತೆ ಆಸಾಮಿ ಪತ್ರವನ್ನು ನೀಡಿದ್ದರೂ ಅದನ್ನು ಸ್ವೀಕರಿಸಿ, ಕರ್ತವ್ಯಕ್ಕೆ ಹಾಜರಾಗದೇ ಕರ್ತವ್ಯದಲ್ಲಿ ಅನಧಿಕೃತವಾಗಿ ಗೈರುಹಾಜರಿಯಲ್ಲಿಯೇ ಮುಂದುವರೆದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುತ್ತಾರೆ ಹಾಗೂ ಈ ಹಿಂದೆ ಜೆ.ಸಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅನೇಕ ಸಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಅರ್ಜಿದಾರರು ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು ನಗರ, ಇವರ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 12.01.2012ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ, ದಿನಾಂಕ 26.06.2009 ರಿಂದ 28.10.2010ರವರೆಗೆ 490 ದಿನಗಳ ಗೈರುಹಾಜರಿ ಅವಧಿಯನ್ನು ಸಂಬಳ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21.06.2012ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 21 ಪೊಸಿಅ 2013 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವರದರಾಜು, ಮಾಜಿ ಪಿ.ಸಿ.–8871, ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.893**

**SC.30**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ರಾಘವೇಂದ್ರ ಆರ್ ವಡ್ಡರ್, ಎ.ಪಿ.ಸಿ 307, ಡಿ.ಎ.ಆರ್., ಬೆಂಗಳೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ: 19/ಡಿಇ/2011 (ಒ.ಬಿ. ಸಂಖ್ಯೆ:338/2011) ದಿನಾಂಕ: 14.10.2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/12/ಪನ್ನಿ/2012, (ಒ.ಬಿ.ಸಂಖ್ಯೆ:64/2012–13) ದಿನಾಂಕ: 11.09.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16.02.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)81/2012–13 ದಿನಾಂಕ: 02.05.2013

**ಪ್ರಸ್ತಾವನೆ:**

ಶ್ರೀ ರಾಘವೇಂದ್ರ ಆರ್ ವಡ್ಡರ್, ಎ.ಪಿ.ಸಿ 307., ಡಿಎಆರ್, ಬೆಂಗಳೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಾಹನ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಕರ್ತವ್ಯಲೋಪ, ಬೇಜವಾಬ್ದಾರಿತನ ಹಾಗೂ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ರಾಘವೇಂದ್ರ ಆರ್ ವಡ್ಡರ್, ಎ.ಪಿ.ಸಿ 307, ಆದ ನೀವು ಡಿ.ಎ.ಆರ್., ಬೆಂಗಳೂರು ಜಿಲ್ಲೆ ಇಲ್ಲಿ ವಾಹನ ಸಂಖ್ಯೆ: ಕೆಎ–43–ಜಿ–41 ಇಂಟರ್ ಸೆಪ್ಟರ್ ವಾಹನದೊಡನೆ ಡಿವೈ.ಎಸ್.ಪಿ. ಬೆಂಗಳೂರು ಉಪ–ವಿಭಾಗರವರಲ್ಲಿ ವರದಿ ಮಾಡಿಕೊಳ್ಳಲು ಸೂಚಿಸಿ ಎಂ.ಟಿ.ಓ.ರವರು ಕಳುಹಿಸಿದ್ದು, ಡಿವೈ.ಎಸ್.ಪಿ., ರವರ ಸೂಚನೆಯಂತೆ ಸರ್ಜಾಪುರ ಪೊಲೀಸ್ ಠಾಣಾ ಪಿ.ಎಸ್.ಐ.ರವರ ಮುಂದೆ ದಿನಾಂಕ 12.05.2011ರಂದು ವರದಿ ಮಾಡಿ ನಂತರ ದಿನಾಂಕ: 12.05.2011 ಮತ್ತು 13.05.2011ರಂದು ಗೈರು ಹಾಜರಾಗಿರುತ್ತಾರೆ ಎಂದು ಪಿ.ಎಸ್.ಐ. ಸರ್ಜಾಪುರ ರವರು ರಹದಾರಿ ಪತ್ರದಲ್ಲಿ ನಮೂದಿಸಿ ಪಿ.ಎಸ್.ಐ. ಅತ್ತಿಬಲೆ ಇವರ ಮುಂದೆ ವರದಿ ಮಾಡಿಕೊಳ್ಳುವಂತೆ ಸೂಚಿಸಿ ದಿನಾಂಕ 14.05.2011ರಂದು ಬಿಡುಗಡೆಗೊಳಿಸಿರುತ್ತಾರೆ. ಇಂಟರ್ ಸೆಪ್ಟರ್ ವಾಹನವು ಸುಮಾರು 25 ಲಕ್ಷ ರೂ.ಗಳ ಕಂಪ್ಯೂಟರ್ ಉಪಕರಣಗಳನ್ನು ಹೊಂದಿರುವ ವಾಹನವಾಗಿದ್ದು, ಮೇಲಾಧಿಕಾರಿಗಳ ಗಮನಕ್ಕೆ ತರದೇ ಅದನ್ನು ಕರ್ತವ್ಯದ ಸ್ಥಳದಲ್ಲಿಯೇ ಬಿಟ್ಟು ನೀವು ನಿಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪವೆಸಗಿ, ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 14.10.2011ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಅನ್ವಯವಾಗದಂತೆ ಆರು ತಿಂಗಳು ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11.09.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 26 ಪೊಸಿಅ 2013 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಘವೇಂದ್ರ ಆರ್ ವಡ್ಡರ್, ಎ.ಪಿ.ಸಿ 307., ಡಿಎಆರ್, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.892
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಗಂಡಸಿ ಪೋಲೀಸ್ ಠಾಣೆ, ಅರಸೀಕೆರೆ, ಹಾಸನ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರ ಆದೇಶ ಸಂಖ್ಯೆ: ಸಿಬ್ಬಂದಿ–(1)/ಪಿಆರ್/101/11–12 (ಒ.ಬಿ. ಸಂಖ್ಯೆ:17/12–13) ದಿನಾಂಕ: 11.05.2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/32/2012–13 (ಒ.ಬಿ.ಸಂಖ್ಯೆ:38/2012–13) ದಿನಾಂಕ: 08.11.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14.02.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)86/2012–13 ದಿನಾಂಕ: 21.06.2013

**ಪ್ರಸ್ತಾವನೆ:**

ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಹಾಲಿ ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಈ ಹಿಂದೆ ಚನ್ನರಾಯಪಟ್ಟಣ ಪೊಲೀಸ್ ಠಾಣೆ [ಕಾ & ಸು] ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರತರವಾಗಿ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಆದ ನೀವು ಚನ್ನರಾಯಪಟ್ಟಣ ನಗರ ಠಾಣೆಯ (ಕಾ & ಸು) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ದಿನಾಂಕ: 4/5.03.2012ರ ರಾತ್ರಿ 12–45 ರಲ್ಲಿ ಚನ್ನರಾಯಪಟ್ಟಣ (ಗ್ರಾ) ಠಾಣಾ ವ್ಯಾಪ್ತಿಯ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 48 ರಲ್ಲಿ ಇರುವ ಆಲಗೋಡನಹಳ್ಳಿ ಗೇಟ್ ಬಳಿ ಫಿರ್ಯಾದುದಾರರಾದ ಶ್ರೀ ರಘುರಾಮ್, ಕೆ.ಆರ್. ಪುರಂ ವಾಸಿ, ಬೆಂಗಳೂರು, ಇವರು ಟೆಂಪೋ ಟ್ರಾವೆಲರ್ ಸಂಖ್ಯೆ ಕೆಎ–02 ಎಎ–445 ವಾಹನದಲ್ಲಿ ಚಾಲಕ ಸೇರಿದಂತೆ ಇತರೇ 12 ಜನ ಕುಕ್ಕೆ ಸುಬ್ರಹ್ಮಣ್ಯದಿಂದ ಬೆಂಗಳೂರಿಗೆ ಹೋಗುತ್ತಿರುವಾಗ ನಂಬರ್ ಪ್ಲೇಟ್ ಇಲ್ಲದ ಕಾರೊಂದರಲ್ಲಿ ಬಂದ 5 ಜನ ಅಪರಿಚಿತ ದುಷ್ಕರ್ಮಿಗಳು ಟೆಂಪೋ ಟ್ರಾವೆಲರ್ ತಡೆದು, ಒಳಗಿದ್ದವರನ್ನು ಮಚ್ಚು ಹಾಗೂ ಲಾಂಗ್‌ಗಳಿಂದ ಬೆದರಿಸಿ ಅವರುಗಳಿಂದ 500 ಗ್ರಾಂ ಚಿನ್ನ, ರೂ.4,400/– ನಗದು ಹಾಗೂ 3 ಮೊಬೈಲ್ ಫೋನ್‌ಗಳನ್ನು ದರೋಡೆ ಮಾಡಿಕೊಂಡು ಪರಾರಿಯಾಗಿರುತ್ತಾರೆ. ಈ ಬಗ್ಗೆ ಫಿರ್ಯಾದುದಾರರಾದ ಶ್ರೀ ರಘುರಾಮ್ ಇವರು ದಿ: 05–3–2012 ರಂದು ರಾತ್ರಿ 8–30 ರಲ್ಲಿ ಸಲ್ಲಿಸಿದ ದೂರಿನನ್ವಯ ಚನ್ನರಾಯಪಟ್ಟಣ (ಗ್ರಾ) ಠಾಣೆಯಲ್ಲಿ ಉಲ್ಲೇಖದಲ್ಲಿ ಕಾಣಿಸಲಾದ ಪ್ರಕರಣ ದಾಖಲಾಗಿರುತ್ತದೆ. ರಾಷ್ಟ್ರೀಯ ಹೆದ್ದಾರಿಗಳಲ್ಲಿ ರಾತ್ರಿ ವೇಳೆ ನಡೆಯುವ ಅಪರಾಧಗಳನ್ನು ತಡೆಗಟ್ಟುವ ಸಲುವಾಗಿ ಚನ್ನರಾಯಪಟ್ಟಣ ನಗರ ಠಾಣಾ ವ್ಯಾಪ್ತಿಯಲ್ಲಿರುವ ರಾಷ್ಟ್ರೀಯ ಹೆದ್ದಾರಿ 48ರಲ್ಲಿ ಒಂದು ಚೆಕ್‌ಪೋಸ್ಟ್ ಸ್ಥಾಪಿಸಿ ರಾತ್ರಿ ವೇಳೆಯಲ್ಲಿ ಸದರಿ ಚೆಕ್‌ಪೋಸ್ಟ್‌ಗೆ ಸಿಬ್ಬಂದಿಗಳನ್ನು ನೇಮಕ ಮಾಡಿ, ಚೆಕ್‌ಪೋಸ್ಟ್ ಮುಖಾಂತರ ಹಾದುಹೋಗುವ ಎಲ್ಲಾ ವಾಹನಗಳ ನೋಂದಣಿ ಸಂಖ್ಯೆಗಳನ್ನು ವಹಿಯೊಂದರಲ್ಲಿ ನಮೂದಿಸಿ, ಅನುಮಾನಾಸ್ಪದ ವಾಹನಗಳನ್ನು ತಪಾಸಣೆ ಮಾಡುವಂತೆ ಹಾಗೂ ಸರಿಯಾದ ರೀತಿಯಲ್ಲಿ ಠಾಣಾ ವ್ಯಾಪ್ತಿಯಲ್ಲಿ ರಾತ್ರಿ ಗಸ್ತು ನಡೆಸಿ ಅಪರಾಧಗಳು ನಡೆಯದಂತೆ ಸೂಕ್ತ ಕ್ರಮ ಜರುಗಿಸತಕ್ಕದ್ದೆಂದು ನಿಮಗೆ ಮಾಸಿಕ ಅಪರಾಧ ಸಭೆಯಲ್ಲಿ ಅನೇಕ ಬಾರಿ ನಿರ್ದಿಷ್ಟವಾಗಿ ಸೂಚಿಸಿದ್ದರೂ ಸಹ ನೀವು ಸದರಿ ಚೆಕ್‌ಪೋಸ್ಟನ್ನು ಸ್ಥಾಪಿಸಿರುವುದಿಲ್ಲ ಹಾಗೂ ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಸರಿಯಾದ ರಾತ್ರಿ ಗಸ್ತನ್ನು ಏರ್ಪಡಿಸಿ ಅಪರಾಧಗಳನ್ನು ತಡೆಗಟ್ಟಲು ಕ್ರಮ ಜರುಗಿಸದೇ ನಿಮ್ಮ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾಗಿ ನಿರ್ಲಕ್ಷ್ಯತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 11.05.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಪಡೆಯುವ ವೇತನ ಬಡ್ತಿಗಳಿಗೆ ಬಾಧಕವಾಗದಂತೆ 06 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08.11.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರತರವಾಗಿ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 29 ಪೊಸಿಅ 2013 ಬೆಂಗಳೂರು, ದಿನಾಂಕ: 13.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಗಂಡಸಿ ಪೊಲೀಸ್ ಠಾಣೆ, ಅರಸೀಕೆರೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.848

SC.30

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಶಿವರಾಜ್ ಆರ್ ಮುಧೋಳ್, ಪಿಎಸ್ಐ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಪಿಆರ್–88(1)/11–12 (ಓ.ಬಿ. ಸಂಖ್ಯೆ: 1/12–13) ದಿನಾಂಕ: 25.04.2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/31/2012–13 (ಒ.ಬಿ. ಸಂಖ್ಯೆ: 39/2012–13) ದಿನಾಂಕ: 08.11.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14.02.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)87/2012–13 ದಿನಾಂಕ: 21.06.2013
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 91 ಸಿಎನ್‌ಎಸ್ 2013 ದಿನಾಂಕ: 12.08.2013

**ಪ್ರಸ್ತಾವನೆ:**

ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಚನ್ನರಾಯಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿಯಲ್ಲಿ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಆದ ನೀವು ಚನ್ನರಾಯಪಟ್ಟಣ ನಗರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ದಿನಾಂಕ: 24–12–2011 ರಂದು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಡೆದ ಮಾಸಿಕ ಅಪರಾಧ ಸಭೆಯಲ್ಲಿ ಚನ್ನರಾಯಪಟ್ಟಣ ನಗರ ಠಾಣಾ ವ್ಯಾಪ್ತಿಯ ಅಪರಾಧ ಪ್ರಕರಣಗಳ ಬಗ್ಗೆ ಪರಿಶೀಲಿಸಲಾಗಿ, ಕಳೆದ 3 ತಿಂಗಳಿನಿಂದ ನಾನ್ ಹೀನಸ್ ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ದೋಷಾರೋಪಣ ಸಲ್ಲಿಸುವ ಮೊದಲು ಡಿವೈ.ಎಸ್.ಪಿ., ಹೊಳೆನರಸೀಪುರ ರವರಿಂದ ಪರಿಶೀಲನೆ ಮಾಡಿಸಿ ಅವರಿಂದ ಅನುಮತಿ ಹಾಗೂ ಮೇಲು ಸಹಿ ಪಡೆಯದೇ ಘನ ನ್ಯಾಯಾಲಯಕ್ಕೆ ದೋಷಾರೋಪಣ ಪತ್ರವನ್ನು ಸಲ್ಲಿಸಿರುತ್ತೀರಿ. ನೀವೋರ್ವ ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ನಿಮ್ಮ ಠಾಣಾ ವ್ಯಾಪ್ತಿಯ ಪ್ರಕರಣಗಳ ಬಗ್ಗೆ ದೋಷಾರೋಪಣ ಪತ್ರವನ್ನು ನ್ಯಾಯಾಲಯಕ್ಕೆ ಸಲ್ಲಿಸುವ ಮೊದಲು ಮೇಲಾಧಿಕಾರಿಗಳ ಅನುಮತಿ ಹಾಗೂ ಮೇಲುಸಹಿಯನ್ನು ಪಡೆಯಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 25.04.2012ರ ಆದೇಶದಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಪಡೆಯುವ ವೇತನ ಬಡ್ತಿಗಳಿಗೆ ಬಾಧಕವಾಗದಂತೆ 06 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08.11.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 30 ಪೊಸಿಅ 2013 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವರಾಜ್ ಆರ್. ಮುದೋಳ್, ಪಿ.ಎಸ್.ಐ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರ ಪರಿಷ್ಕರಣ

ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ದಿನಾಂಕ: 25.04.2012ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 23(1)(a)(i)ರನ್ವಯ ಇವರಿಗೆ ವಾಗ್ದಂಡನೆ (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.887**

**SC.30**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಬಿ.ಕೋರಿ, ಸಿಪಿಸಿ–1294, ಬಂಕಾಪೂರ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಹಾವೇರಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ–6/2010 (ಒ.ಬಿ.ಸಂಖ್ಯೆ:62/2012) ದಿನಾಂಕ: 02.03.2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅರಕ್ಷಕ ಮಹಾನಿರೀಕ್ಷಕರು, ಉತ್ತರವಲಯ ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/82/ಉವ/2012 ದಿನಾಂಕ: 02.08.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29.01.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)88/2012–13 ದಿನಾಂಕ: 14.05.2013 ಮತ್ತು 30.05.2013

**ಪ್ರಸ್ತಾವನೆ:**

ಶ್ರೀ ಎಂ.ಬಿ.ಕೋರಿ, ಸಿಪಿಸಿ–1294, ಬಂಕಾಪೂರ ಪೊಲೀಸ್ ಠಾಣೆ, ಹಾವೇರಿ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಇವರು ಹಾವೇರಿ ಶಹರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅಶ್ಲೀಲ ಮತ್ತು ಅಸಭ್ಯವಾಗಿ ವರ್ತಿಸಿ ದುರ್ನಡತೆ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಅರ್ಜಿದಾರರು ಹಾವೇರಿ ಶಹರ ಪೊಲೀಸ್ ಠಾಣೆಯಲ್ಲಿ ಸಿಪಿಸಿ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದು ಇವರನ್ನು ದಿನಾಂಕ 10.04.2010ರಂದು ಹಾವೇರಿ ಶಹರದಲ್ಲಿರುವ ಲೈನ್ಸ ಆಂಗ್ಲ ಮಾದ್ಯಮ ಶಾಲೆಯಲ್ಲಿ ನಡೆಯುವ ಎಸ್.ಎಸ್.ಎಲ್.ಸಿ ಉತ್ತರ ಪತ್ರಿಕೆಯ ಮೌಲ್ಯಮಾಪನ ಕಾವಲು ಕರ್ತವ್ಯಕ್ಕೆ ನೇಮಿಸಿದ್ದು ಅರ್ಜಿದಾರರು ಸದರಿ ಕರ್ತವ್ಯಕ್ಕೆ ಹೋಗದೇ ದಿನಾಂಕ: 11.04.2010ರಂದು ರಾತ್ರಿ ಸಮವಸ್ತ್ರವನ್ನು ಧರಿಸಿಕೊಂಡೇ ಕಂಠ ಪೂರ್ತಿ ಮದ್ಯ ಕುಡಿದು ಮೈಮೇಲೆ ಪ್ರಜ್ಞೆ ಇಲ್ಲದೆ ಹಾವೇರಿಯ ಹಳೇ ಪಿಬಿ ರಸ್ತೆಯ ಪಕ್ಕದಲ್ಲಿರುವ ಭವಾನಿ ವೈನ್ಸ್ ಶಾಪ್ ಮುಂಬಾಗದಲ್ಲಿ ಅಂಗಾತವಾಗಿ ಬಿದ್ದು ಇಲಾಖೆಯ ಘನತೆಗೆ ಧಕ್ಕೆ ಉಂಟು ಮಾಡಿದ್ದಲ್ಲದೇ ರಾತ್ರಿ ಅತಿಯಾದ ಮದ್ಯಪಾನ ಅಮಲಿನಲ್ಲಿ ಸಾರ್ವಜನಿಕ ಸ್ಥಳದಲ್ಲಿ ಅಶ್ಲೀಲವಾಗಿ ಮತ್ತು ಅಸಬ್ಯವಾಗಿ ವರ್ತಿಸಿ ದುರ್ನಡತೆ ಪ್ರದರ್ಶಿಸಿ ಮಾದ್ಯಮದವರು ಸಹ ಪತ್ರಿಕೆಯಲ್ಲಿ ಈ ಬಗ್ಗೆ ಪ್ರಕಟಿಸುವಂತೆ ಮಾಡಿ ಕರ್ತವ್ಯದಲ್ಲಿ ಘೋರ ದುರ್ನಡತೆ ಅಸಭ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ"

"ಅರ್ಜಿದಾರರನ್ನು ದಿನಾಂಕ: 10.04.2010ರಂದು ಲೈನ್ಸ ಆಂಗ್ಲ ಮಾಧ್ಯಮ ಶಾಲೆಯಲ್ಲಿ ನಡೆಯುವ ಎಸ್.ಎಸ್.ಎಲ್.ಸಿ. ಉತ್ತರ ಪತ್ರಿಕೆಯ ಮೌಲ್ಯಮಾಪನದ ಕಾವಲು ಕರ್ತವ್ಯಕ್ಕೆ ನೇಮಿಸಿದ್ದು, ಸದರಿ ಕರ್ತವ್ಯಕ್ಕೆ ಹೋಗದೇ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಲೋಪ ಎಸಗಿದ್ದು ಅಲ್ಲದೇ, ಪದೇ ಪದೇ ಇವರು ತಮ್ಮ ಕರ್ತವ್ಯಕ್ಕೆ ಗೈರು ಹಾಜರಾಗಿ ಶಿಸ್ತಿನ ಪೊಲೀಸ್ ಇಲಾಖೆಯ ಘನತೆಗೆ ದಕ್ಕೆ ಬರುವಂತೆ ನಡೆದುಕೊಂಡು ಇಲಾಖೆಯ ಶಿಸ್ತಿನ ಕಟ್ಟಳೆಗಳನ್ನು ಉಲ್ಲಂಘಿಸಿ ಘೋರ ಕರ್ತವ್ಯ ನಿರ್ಲಕ್ಷತನ ಪ್ರದರ್ಶಿಸಿರುತ್ತೀರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಹಾವೇರಿ, ಇವರ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02.03.2012ರ ಆದೇಶದಲ್ಲಿ ಅರ್ಜಿದಾರರ ಮುಂಬರುವ 01 (ಒಂದು) ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಮುಂದೂಡಿ, ಅಮಾನತ್‌ನಲ್ಲಿರಿಸಲಾದ ದಿನಾಂಕ: 14.04.2010 ರಿಂದ 30.06.2010ವರಿಗಿನ 78 ದಿವಸಗಳ ಅವಧಿಯನ್ನು 'ಅಮಾನತ್‌ನಲ್ಲಿದ್ದಂತೆಯೇ' ಎಂದು ಪರಿಗಣಿಸಿ ಈಗಾಗಲೇ ನೀಡಲಾದ ಜೀವನಧಾರ ಭತ್ಯೆಗೆ ಸೀಮಿತಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನೀರಿಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 02.08.2012ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 31 ಪೊಸಿಅ 2013 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಬಿ.ಕೋರಿ, ಸಿಪಿಸಿ–1294, ಬಂಕಾಪೂರ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.889**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ರವಿಕುಮಾರ, ಎ.ಪಿ.ಸಿ.–120, ಡಿ.ಎ.ಆರ್., ದಾವಣಗೆರೆ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/09–2011 (ಓ.ಬಿ. ಸಂಖ್ಯೆ: 1510/2011) ದಿನಾಂಕ: 22–11–2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ ದಾವಣಗೆರೆ, ಇವರ ಆದೇಶ ಸಂಖ್ಯೆ: 49/ಅಪೀಲು/ಸಿಬ್ಬಂದಿ–2/2011–12 ದಿನಾಂಕ: 20–4–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23–8–2012
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)29/2012–13 ದಿನಾಂಕ: 07–02–2013

**ಪ್ರಸ್ತಾವನೆ:**

ಶ್ರೀ ರವಿಕುಮಾರ, ಎಪಿಸಿ 120, ಡಿ.ಎ.ಆರ್., ದಾವಣಗೆರೆ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

" ದಿನಾಂಕ: 20–06–2010 ರಂದು ನೀವು ನಿಮ್ಮ ಪತ್ನಿಯಾದ ಶ್ರೀಮತಿ ರೇಣುಕಾ ರವರು ಅವರ ತವರು ಮನೆಯಾದ ಹುಣಸೆಕಟ್ಟೆ ರಂಗನಾಥಪುರ ಗ್ರಾಮದಲ್ಲಿರುವಾಗ್ಗೆ ಮನೆಗೆ ಅಕ್ರಮವಾಗಿ ಪ್ರವೇಶ ಮಾಡಿ ಶ್ರೀಮತಿ ರೇಣುಕಾ ರವರಿಗೆ ಕಾಲಿನಿಂದ ಹೊಟ್ಟೆಗೆ ಎದೆಗೆ ಒದ್ದು, ಕೈ ಮುಷ್ಟಿ ಮಾಡಿಕೊಂಡು ಭುಜದ ಮೇಲೆ, ಬೆನ್ನಿನ ಮೇಲೆ ಗುದ್ದಿ ಹಲ್ಲೆ ಮಾಡಿದ್ದು, ಈ ಸಂಬಂಧ ನಿಮ್ಮ ಪತ್ನಿಯ ದೂರಿನ ಅನ್ವಯ ದಿನಾಂಕ: 22–06–2010 ರಂದು ಭದ್ರಾವತಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ: 136/2010, ಕಲಂ 448,504,323,506 ಜೊತೆಗೆ 34 ಐಪಿಸಿ ಆಕ್ಟ್ ಅಡಿಯಲ್ಲಿ ಪ್ರಕರಣ ದಾಖಲಾಗಿರುತ್ತದೆ ಸದರಿ ಪ್ರಕರಣದಲ್ಲಿ ನಿಮ್ಮನ್ನು ಭದ್ರಾವತಿ ಗ್ರಾಮಾಂತರ ಪೊಲೀಸರು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರು ಪಡಿಸಿದ್ದು, ಘನ ನ್ಯಾಯಾಲಯವು ದಿನಾಂಕ: 30–06–2010ರಿಂದ 13–04–2010ರವರೆಗೆ 14 ದಿನಗಳ ನ್ಯಾಯಾಂಗ ಬಂಧನದಲ್ಲಿ ಇರುತ್ತೀರಿ ನೀವು ಒಬ್ಬ ಸರ್ಕಾರಿ ನೌಕರನಾಗಿ ಇಲಾಖಾ ನಿಯಮಾವಳಿಗಳನ್ನು ಉಲ್ಲಂಘಿಸಿ ಮೇಲ್ಕಂಡ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಆರೋಪಿಯಾಗಿ ನ್ಯಾಯಾಂಗ ಬಂಧನಕ್ಕೆ ಒಳಗಾಗಿ ಇಲಾಖೆಯ ಸಿಬ್ಬಂದಿಗೆ ಸಲ್ಲದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22–11–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದಿನ ಒಂದು ವರ್ಷಗಳ ಕಾಲ ಮುಂದೂಡಲಾಗಿದೆ. ಹಾಗೂ ಇವರ ಅಮಾನತ್ತಿನ ಅವಧಿ ದಿನಾಂಕ: 30–06–2010 ರಿಂದ 24–08–2010ರ ವರೆಗಿನ ಒಟ್ಟು 56 ದಿನಗಳನ್ನು ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20–04–2012ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದು, ಕರ್ತವ್ಯದಲ್ಲಿ ದುರ್ನಡತೆ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪೊಸಿಅ 2012 ಬೆಂಗಳೂರು, ದಿನಾಂಕ: 31.07.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರವಿಕುಮಾರ, ಎ.ಪಿ.ಸಿ.–120, ಡಿ.ಎ.ಆರ್., ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

PR.850 ಸರ್ಕಾರದ ಅಧೀನ ಕಾರ್ಯದರ್ಶಿ,

SC.30 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಶ್ರೀನಿವಾಸಮೂರ್ತಿ, ಸಿ.ಪಿ.ಸಿ.–727, ತಾವರೇಕೆರೆ ಪೊಲೀಸ್ ಠಾಣೆ ಹಾಲಿ ಕುಣಿಗಲ್ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಪನ್ಸಿ.ಡಿಇ–4/2000 (ಓ.ಬಿ. ಸಂಖ್ಯೆ: 139/2001) ದಿನಾಂಕ: 04–8–2001
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು:48:2001–02 (ಓ.ಬಿ. ಸಂಖ್ಯೆ:177/2001–02) ದಿನಾಂಕ: 21–12–2001
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–10–2012
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)33/2012–13 ದಿನಾಂಕ: 05–3–2013 ಮತ್ತು 28–3–2013

**ಪ್ರಸ್ತಾವನೆ:**

ಶ್ರೀ ಶ್ರೀನಿವಾಸಮೂರ್ತಿ, ಸಿ.ಪಿ.ಸಿ.–727, ತಾವರೇಕೆರೆ ಪೊಲೀಸ್ ಠಾಣೆ ಹಾಲಿ ಶಿರಾ ಇವರು ಈ ಹಿಂದೆ ಕುಣಿಗಲ್ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಮತ್ತು ಇಲಾಖೆಗೆ ಅಗೌರವವನ್ನುಂಟು–ಮಾಡಿದ ಆಪಾದನೆ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ: 08–4–2000 ರಂದು ರಾತ್ರಿ 12.30 ಗಂಟೆಯ ಸಮಯದಲ್ಲಿ ಶ್ರೀಮತಿ ರತ್ನಮ್ಮ ಎಂಬುವವರಿಗೆ ಹೆರಿಗೆ ನೋವು ಕಾಣಿಸಿಕೊಂಡಿದ್ದು, ಅಂದು ರಾತ್ರಿ ಎ.ಎಂ.ಎ. ಗಂಗಮ್ಮ ಹಾಗೂ ಲಕ್ಷ್ಮಿ ಕಾಮಾಟಿಯವರು ಸದರಿ ರತ್ನಮ್ಮಳನ್ನು ಶಿರಾ ಆಸ್ಪತ್ರೆಗೆ ಹೆರಿಗೆಗಾಗಿ ಕಳುಹಿಸಿ, ಮನೆಗೆ ವಾಪಸ್ ಬರುವಾಗ ವಿದ್ಯುತ್ ನಿಲುಗಡೆಯಾಗಿದ್ದ ಸಮಯದಲ್ಲಿ ಅಲ್ಲೇ ಸಮೀಪದಲ್ಲೆ ವಾಸವಾಗಿದ್ದ ಸಿ.ಪಿ.ಸಿ.–854, ಹಾಗೂ ನಿಮ್ಮ ಸಹಾಯ ಕೇಳಲಾಗಿ, ನೀವು ಲಕ್ಷ್ಮೀಕಾಮಾಟಿಯನ್ನು ಮನೆಗೆ ಮೊದಲು ಬಿಟ್ಟು ನಂತರ ಎ.ಎನ್.ಎಂ. ಗಂಗಮ್ಮನನ್ನು ಮನೆಗೆ ಬಿಡಲು ಹೋಗುವ ಸಮಯದಲ್ಲಿ ಶ್ರೀ ಬಂಡಿರಂಗನಾಥಸ್ವಾಮಿ ದೇವಸ್ಥಾನದ ಮುಂಭಾಗ ಮುನಿಸಿಪಲ್ ಮೈದಾನದ ಹತ್ತಿರ ತಡೆದು, ಅವರನ್ನು ಎತ್ತಿಕೊಂಡು ಹೋಗಿ, ಮಾನಭಂಗ ಮಾಡಲು ಪ್ರಯತಿಸಿದ್ದು, ಈ ಬಗ್ಗೆ ತಾವರೆಕೆರೆ ಪೊಲೀಸ್ ಠಾಣೆ ಮೊ.ಸಂ. 50:2000 ಕಲಂ 341–354 ಐಪಿಸಿ ರೀತ್ಯಾ ಮೊಕದ್ದಮೆ ದಾಖಲಾಗಿರುತ್ತದೆ. ಇದು ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ಇಲಾಖೆಗೆ ಅಗೌರವವನ್ನುಂಟು ಮಾಡಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04–8–2001ರ ಆದೇಶದಲ್ಲಿ ಅರ್ಜಿದಾರರನ್ನು ಈ ಆದೇಶ ಜಾರಿಯಾದ ದಿನಾಂಕದಿಂದ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿ ದಿನಾಂಕ: 09–4–2000 ರಿಂದ 18–9–2000 ರವರೆಗೆ ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21–12–2001ರ ಆದೇಶದಲ್ಲಿ ಈ ಕೆಳಕಂಡಂತೆ ದಂಡನೆಯನ್ನು ಮಾರ್ಪಡಿಸಿರುತ್ತಾರೆ.

(1) ಅಪೀಲುದಾರರನ್ನು ಪುನಃ ಸೇವೆಗೆ ತೆಗೆದುಕೊಳ್ಳಲಾಗಿದೆ.

(2) ಅಪೀಲುದಾರರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ 04 ವರ್ಷಗಳ ಕಾಲ ಇಳಿಸಲಾಗಿದೆ.

(3) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

(4) ಅಪೀಲುದಾರರು ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದಂತೆ ಎಂದೇ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು,

ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 103 ಪೊಸಿಅ 2012 ಬೆಂಗಳೂರು, ದಿನಾಂಕ: 31–7–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶ್ರೀನಿವಾಸಮೂರ್ತಿ, ಸಿ.ಪಿ.ಸಿ.–727, ತಾವರೇಕೆರೆ ಪೊಲೀಸ್ ಠಾಣೆ ಹಾಲಿ ಕುಣಿಗಲ್ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.849**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಡಿ. ಮಹದೇವಯ್ಯ, ಸಿ.ಪಿ.ಸಿ 477., ಚೇಳೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/ಅಮಾನತ್ತು/11/2011 (ಒ.ಬಿ.ನಂ./625/2011) ದಿನಾಂಕ 03.02.2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/50/ಶಿಕ್ಷೆ/2012, (ಒ.ಬಿ.ಸಂಖ್ಯೆ:79/2012–13) ದಿನಾಂಕ: 26.09.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24.12.2012
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)68/2012–13 ದಿನಾಂಕ: 02.05.2013

**ಪ್ರಸ್ತಾವನೆ:**

ಶ್ರೀ ಡಿ. ಮಹದೇವಯ್ಯ, ಸಿ.ಪಿ.ಸಿ 477., ಚೇಳೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಪೊಲೀಸ್ ಅಧೀಕ್ಷಕರು, ತುಮಕೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಹಾಗೂ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:–

"ಅರ್ಜಿದಾರರು ದಿನಾಂಕ 08.04.2011ರಂದು ರಾತ್ರಿ 11–10 ಗಂಟೆ ಸಮಯದಲ್ಲಿ ಠಾಣೆಗೆ ಮದ್ಯಪಾನ ಮಾಡಿ ಬಂದು ಠಾಣಾ ಸಿಬ್ಬಂದಿಗೆ ಅವ್ಯಾಚ ಶಬ್ದಗಳಿಂದ ನಿಂದಿಸಿ ಅಶಿಸ್ತು ಪ್ರದರ್ಶಿಸುವುದರೊಂದಿಗೆ ದುರ್ನಡತೆ ತೋರಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 03.02.2011ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 6 (ಆರು) ತಿಂಗಳ ಕಾಲ ಮುಂದೂಡಿ ದಂಡನೆಯನ್ನು ವಿಧಿಸಿ ದಿನಾಂಕ: 14.06.2011 ರಿಂದ 23.7.2011ರವರೆಗಿನ ಅಮಾನತ್ತು ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26.09.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಹಾಗೂ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 152 ಪೊಸಿಅ 2013 ಬೆಂಗಳೂರು, ದಿನಾಂಕ: 22.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಮಹದೇವಯ್ಯ, ಸಿ.ಪಿ.ಸಿ 477., ಚೇಳೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.890**

**SC.30**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು